# ಜುಂಜಪ್ಪನ ಕಾವ್ಯ ಒಂದು ಅಧ್ಯಯನ

(ಕನ್ನಡ ಎಂ.ಫಿಲ್. ಪದವಿಗಾಗಿ
ಕನ್ನಡ ಹಂಪಿ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ನಿಬಂಧ)


ಸಂಶೋಧಕರು :

**ಕುಮಾರಿ ರತ್ನಮ್ಮ .ಬಿ**

ಮಾರ್ಗದರ್ಶಕರು :

**ಡಾ|| ಅರ್ಜುನಪುರಿ ಅಪ್ಪಾಜಿಗೌಡರು**






ಕರ್ನಾಟಕ ಸಂಘ (ರಿ), ಮಂಡ್ಯ

**ಎಂ. ಎಲ್ ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ**

(ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ)

2007–2008

# ಜುಂಜಪ್ಪನ ಕಾವ್ಯ ಒಂದು ಅಧ್ಯಯನ

(ಕನ್ನಡ ಎಂ.ಫಿಲ್. ಪದವಿಗಾಗಿ
ಕನ್ನಡ ಹಂಪಿ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ನಿಬಂಧ)

ಸಂಶೋದಕರು :
**ಕುಮಾರಿ ರತ್ನಮ್ಮ .ವಿ**



ಮಾರ್ಗದರ್ಶಕರು :
**ಡಾ|| ಅರ್ಜುನಪುರಿ ಅಪ್ಪಾಜಿಗೌಡರು**







ಕರ್ನಾಟಕ ಸಂಘ (ರಿ), ಮಂಡ್ಯ
**ಎಂ. ಎಲ್ ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ**
(ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ)
2007–2008

# ಮಾರ್ಗದರ್ಶಕರ ಪ್ರಮಾಣ ಪತ್ರ

**ಕುಮಾರಿ ರತ್ನಮ್ಮ ವಿ.** ರವರು ನನ್ನ ಮಾರ್ಗದರ್ಶನದಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಎಂ.ಫಿಲ್., ಪದವಿಗಾಗಿ ಸಂಶೋಧನೆ ನಡೆಸಿ **'ಜುಂಜಪ್ಪನ ಕಾವ್ಯ ಒಂದು ಅಧ್ಯಯನ'** ಎಂಬ ಶೀರ್ಷಿಕೆಯನ್ನು ಈ ನಿಬಂಧವನ್ನು ಸಿದ್ಧಪಡಿಸಿರುತ್ತಾರೆ. ಈ ನಿಬಂಧವು ಈ ಮೊದಲು ಭಾಗಶಃ ಆಗಲಿ, ಪೂರ್ಣವಾಗಿ ಆಗಲಿ ಬೇರೆ ಯಾವುದೇ ಡಿಗ್ರಿ, ಡಿಪ್ಲೋಮ ಅಥವಾ ಇತರೆ ಯಾವುದೇ ಪದವಿ ಪರೀಕ್ಷೆಗಳಿಗಾಗಲೀ ಒಪ್ಪಿಸಿರುವುದು ನನ್ನ ಗಮನಕ್ಕೆ ಬಂದಿಲ್ಲ.

ಕುಮಾರಿ ರತ್ನಮ್ಮ ವಿ. ರವರು ಈ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ಎಂ.ಫಿಲ್. ಪದವಿಗಾಗಿ ಒಪ್ಪಿಸಲು ನನ್ನ ಸಮ್ಮತಿ ಇದೆ.

13/09/08

ಸ್ಥಳ : ಮಂಡ್ಯ
ದಿನಾಂಕ : 12-09-2008

**ಡಾ॥ ಅರ್ಜುನಪುರಿ ಅಪ್ಪಾಜಿಗೌಡ,** ಪಿ.ಹೆಚ್.ಡಿ.,
ನಿವೃತ್ತ ಪ್ರಾಂಶುಪಾಲರು
ಹೆಚ್.ಕೆ.ವೀರಣ್ಣಗೌಡ ಕಾಲೇಜು, ಮದ್ದೂರು.

# ಅಭ್ಯರ್ಥಿಯ ಪ್ರಮಾಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ 2007-08ನೇ ಸಾಲಿಗೆ ಕನ್ನಡ ಎಂ.ಫಿಲ್. ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **"ಜುಂಜಪ್ಪನ ಕಾವ್ಯ ಒಂದು ಅಧ್ಯಯನ"** ವಿಷಯವನ್ನು ಆಯ್ಕೆ ಮಾಡಿಕೊಂಡು **ಡಾ॥ ಅರ್ಜುನಪುರಿ ಅಪ್ಪಾಜಿಗೌಡ, ಪಿ.ಹೆಚ್.ಡಿ.,** ರವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲೀ, ನಿಬಂಧದ ಅಧ್ಯಾಯಗಳಾಗಲೀ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತಿದ್ದೇನೆ.

ಕನ್ನಡ ವಿಶ್ವವಿದ್ಯಾಲಯವು ನೀಡುವ ಕನ್ನಡ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಸ್ಥಳ : ಮಂಡ್ಯ.

ದಿನಾಂಕ : 12-09-2008

**ಕುಮಾರಿ ಎ.ರತ್ನಮ್ಮ, ಎಂ.ಎ.,**
ಕನ್ನಡ ಎಂ.ಫಿಲ್. ವಿದ್ಯಾರ್ಥಿನಿ
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ)
ಕರ್ನಾಟಕ ಸಂಘ (ರಿ), ಮಂಡ್ಯ.

# ಪರಿವಿಡಿ

## ಜುಂಜಪ್ಪನ ಕಾವ್ಯ ಒಂದು ಅಧ್ಯಯನ

# ಅಧ್ಯಾಯ – 1

# ಜುಂಜಪ್ಪನ ಕಾವ್ಯದ ಉದ್ದೇಶ ಮತ್ತು ವ್ಯಾಪ್ತಿ

**ಪೀಠಿಕೆ :**

ಕನ್ನಡ ಜನಪದ ಮಹಾಕಾವ್ಯಗಳ ಸಾಲಿನಲ್ಲಿ ಜುಂಜಪ್ಪನ ಕಾವ್ಯವು ಒಂದು ಪ್ರಮುಖ ಸ್ಥಾನವನ್ನು ಪಡೆದಿದೆ. ಗಣೆಯವರು ಹಾಡುವ ಈ ಕಾವ್ಯವನ್ನು ಜೀ.ಶಂಪ., ತೀ. ನಂ. ಶಂಕರನಾರಾಯಣ, ಚಲುವರಾಜು, ಕಾಳೇಗೌಡ ನಾಗವಾರ, ಜಿ.ವಿ. ಆನಂದಮೂರ್ತಿ ಮುಂತಾದ ಅನೇಕಾರು ಸಂಗ್ರಹಕರು ಸಂಗ್ರಹಿಸಿ ಸಂಪಾದಿಸಿದ್ದಾರೆ. ಚಲುವರಾಜುರವರ ಪ್ರಕಾರ ಈ ಕಾವ್ಯ ಹದಿನಾಲ್ಕು ಸಂದುಗಳಿಂದ ಕೂಡಿದೆ. ಈ ಒಂದೊಂದು ಸಂದು ಒಂದೊಂದು ಕಥಾನಕ. ಹೀಗೆ ಹಲವು ಕಥಾನಕಗಳನ್ನು ಹೊಂದಿರುವ ಈ ಕಾವ್ಯದ ಪ್ರತಿಯೊಂದು ಸಂದು ಸ್ವತಂತ್ರ ಪ್ರತ್ಯೇಕ ಅಸ್ತಿತ್ವ ಹೊಂದಿದೆ, ಕಾವ್ಯ ವಿಸ್ತಾರದ ದೃಷ್ಟಿಯಿಂದ ಇದು ಮೂರು ನಾಲ್ಕು ರಾತ್ರಿಗಳ ಕತೆ. ಮೂರು ತಲೆ ಮಾರುಗಳ ಕಲೆ. ಇವರ ವಾದ್ಯಗಣೆ, ಇತರ ಮೇಳದ ವಾದ್ಯಗಳಂತೆ ಅಬ್ಬರವಿಲ್ಲ. ಎರಡು ಮೂಳ ಉದ್ದದ ಬಿದಿರುಕೊಳಲು ಇದನ್ನು ಊದುವವನು ಒಬ್ಬನಾದರೆ ಹಾಡುವವನು ಮತ್ತೊಬ್ಬ.

ಜುಂಜಪ್ಪನ ಕಾವ್ಯ ಸಾಹಿತ್ಯ ಮತ್ತು ಸಂಸ್ಕೃತಿಯ ಅಧ್ಯಯನದಲ್ಲಿ ಬಹು ಮುಖ್ಯ ಪಾತ್ರವನ್ನು ವಹಿಸುತ್ತದೆ. ಇದರಲ್ಲಿ ಸಾಹಿತ್ಯ ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ ಕೆಲವು ಮುಖ್ಯ ಅಂಶಗಳನ್ನು ಗುರುತಿಸಬಹುದು. ಸಾಹಿತ್ಯ ಮಾನವನಿಗೆ ಅವಶ್ಯಕ ಜನಪದರು ಮನೆ ರಂಜನೆಗಾಗಿ, ನೀತಿ ಹೇಳುವುದಕ್ಕಾಗಿ ಜನಪದ ಪ್ರಕಾರಗಳಾದ ಕಥೆ, ಗೀತೆ, ಖಂಡಕಾವ್ಯ, ಗಾದೆ, ಒಗಟು, ಲಾವಣಿ ಮುಂತಾದವುಗಳನ್ನು ಕಂಡುಕೊಂಡರು. ಇವುಗಳಲ್ಲಿ ಜುಂಜಪ್ಪನ ಕಾವ್ಯವು ಕಾಡುಗೊಲ್ಲರಲ್ಲಿ ಪ್ರಮುಖ ಪಾತ್ರವಹಿಸಿದೆ.

ಪ್ರಸ್ತುತ ನಿಬಂಧದಲ್ಲಿ ಜುಂಜಪ್ಪನ ಕಾವ್ಯದ ಬಗ್ಗೆ ಅಧ್ಯಯನ ಕೈಗೊಳ್ಳಲಾಗಿದೆ, ಈ ಅಧ್ಯಯನಕ್ಕೆ ಹಿನ್ನೆಲೆಯಾಗಿ ಜುಂಜಪ್ಪ ಕಾವ್ಯದ ಬಗ್ಗೆ ಬರೆದಿರುವ ಅನೇಕಾರು ಸಂಪಾದಕರು ವಿವರಣೆ ನೀಡಿದ್ದೇನೆ. ಇದಕ್ಕೆ ಕಾರಣವು ಇದೆ, ನಾನು ಜನಪದದ ವಿದ್ಯಾರ್ಥಿ, ಡಾ॥ ಕಾಳೇಗೌಡ ನಾಗವಾರರವರು ಪಾಠ ಮಾಡುತ್ತಾ ವಿದ್ಯುತ್ ಇಲ್ಲದ, ವಿಧುವೆಯರಿಲ್ಲದ ವಿದ್ಯಾವಂತರಿಲ್ಲದ ಊರು, ಕಾಡುಗೊಲ್ಲರ ಊರು ಎಂದಿದ್ದರು, ನನಗಾಗ ಆಶ್ಚರ್ಯವಾಗಿತ್ತು. ಇವರ ಬಗ್ಗೆ

ತಿಳಿಯಬೇಕೆನ್ನುವ ಕುತೂಹಲ ನನ್ನಲ್ಲಿತ್ತು. ಇದನ್ನೆಲ್ಲಾ ತಿಳಿದುಕೊಳ್ಳುವ ಸುಯೋಗ ನನಗೀಗ ಒದಗಿದೆ. ನಾನು ತಿಳಿದು, ತಮಗೆಲ್ಲಾರಿಗೂ ಕಾಡುಗೊಲ್ಲರ ಸಾಹಿತ್ಯ, ಜನ ಜೀವನವನ್ನು ತಿಳಿಸುವ ಪ್ರಯತ್ನ ನನ್ನದು.

ಆದುದ್ದರಿಂದ ಜುಂಜಪ್ಪನ ಕಾವ್ಯದ ಒಂದು ಕಿರು ನೋಟವನ್ನು, ಕಾಡುಗೊಲ್ಲರು ಕಿರು ಪರಿಚಯಗಳನ್ನು ಮಾಡಿಕೂಡುವ ಉದ್ದೇಶ ನನ್ನದು. ನಾನು ಏಳು ಅಧ್ಯಯಗಳನ್ನು ನಿಮ್ಮ ಮುಂದೆ ಇಟ್ಟಿದ್ದೇನೆ. ಕೆಲವು ಜನಪದ ಮಹಾಕಾವ್ಯಗಳ ಬಗ್ಗೆ ಜನಪದ ವೃತ್ತಿಗಾಯಕರ ತಿಳಿಸುತ್ತಾ. ಇನ್ನು ಉಳಿದ ಅಧ್ಯಯನಗಳಲ್ಲಿ ಜುಂಜಪ್ಪನ ಕಾವ್ಯದಲ್ಲಿ ವ್ಯಕ್ತವಾಗುವ ಕಾಡುಗೊಲ್ಲರ ಜನಜೀವನ, ಬದುಕು ಸಂಪ್ರದಾಯ, ಜುಂಜಪ್ಪನ ಕಾವ್ಯ, ಕಾವ್ಯದ ಮಹತ್ವ ಇವುಗಳ ಬಗ್ಗೆ ನನಗೆ ತಿಳಿದಷ್ಟು ಬರೆಯುವುದಕ್ಕೆ ಹೊರಟಿದ್ದಾನೆ.

ನಾನು ತಿಳಿದು, ತಿಳಿದಂತಹ ವಿಷಯವನ್ನು ತಮಗೆಲ್ಲರಿಗೂ ತಿಳಿಸುವ ಪ್ರಯತ್ನ ನನ್ನದು.

# ಅಧ್ಯಾಯ – 2

## ಜನಪದ ಮಹಾ ಕಾವ್ಯಗಳು

ಮಹಾಕಾವ್ಯ ಉದಾತ್ತ ಗುಣ ಸ್ವಭಾವಗಳನ್ನು ಹೊಂದಿರುವ ಮಹಾನ್ ವ್ಯಕ್ತಿಗಳ ಜೀವನ ಚಿತ್ರವನ್ನ, ಸಾರ್ವಕಾಲಿಕ ಸತ್ಯವನ್ನ ಸಾರುವಂತಹದ್ದು.

ಮಹಾತ್ತಾದ ವಸ್ತು, ಶೈಲಿ, ಛಂದಸ್ಸು, ಚಿಂತನೆ, ಕಲ್ಪನೆ, ಪತ್ರಿಭೆ, ಸಂಸ್ಕೃತಿಗಳ ಅದ್ಭುತ ರಸಪಾಕ ಮಹಾಕಾವ್ಯ.

ಮಹಾಕಾವ್ಯದಲ್ಲಿ ಅಲಂಕಾರಗಳು, ನವರಸಗಳು ಅಷ್ಟಾದಶ ವರ್ಣನೆಗಳಿದ್ದು, ಗಾತ್ರದಲ್ಲಿ ದೊಡ್ಡದಿರಬೇಕು. ಧರ್ಮ, ವಿಜಯಕ್ಕಾಗಿ ನಾನಾ ಪರಿಯಾ ಸಾಹಸ, ದುಷ್ಟ ವ್ಯಕ್ತಿಗಳ ನಾಶ, ಶಿಷ್ಟರ ರಕ್ಷಣೆಯಾಗಬೇಕು. ಕೊನೆಗೆ ನಾಯಕ ಜಯಶೀಲಿಯಾಗುತ್ತಾನೆ.

"ಒಂದು ಇಡೀ ಜನಾಂಗದ ಸೃಷ್ಠಿಯಾಗಿ ಒಂದು ಇಡೀ ಜನಾಂಗದ ಬಾಳು ಬದುಕು ಸಂಸ್ಕೃತಿ ಇತಿಹಾಸಗಳ ಪ್ರತೀಕವಾಗಿ, ಆ ಜನಾಂಗದ ಬದುಕಿಗೆ ಮಾರ್ಗದರ್ಶಕವಾಗಿ ಆದರ್ಶವಾಗಿ ಇರುವಂತಹುದು ಮಹಾಕಾವ್ಯ ಎನಿಸಿಕೊಳ್ಳುತ್ತದೆ"[1]

ಸಾಕಷ್ಟು ಸುಧೀರ್ಘವಾಗಿದ್ದು, ಉಜ್ವಲವಾದ ಭಾಷೆ, ಘನವಾದ ವಸ್ತು ಮತ್ತು ಉದಾತ್ತ ಪಾತ್ರ ಇವುಗಳ ಸಮ್ಮೀಳವಾಗಿರಬೇಕು. ಅತ್ಯಂತ ಶ್ರೇಷ್ಠವಾದ ಮೌಲ್ಯಗಳನ್ನ ಪ್ರತಿಪಾದಿಸಿರಬೇಕು. ಜನ ಸಮುದಾಯದ ಭಾವನೆಗಳು ಪ್ರತಿ ಬಿಂಬಿತವಾಗಿರಬೇಕು.

ಮಹಾಕಾವ್ಯದಲ್ಲಿ ಎರಡು ಮೂರು ತಲೆಮಾರುಗಳ ವಿಷಯವಿದ್ದು ಸಂಪೂರ್ಣ ವಿವರ ನೀಡುವಂತಿರುತ್ತದೆ. ಅಲ್ಲಿ ಅವರ ರೂಢಿ ಸಂಪ್ರದಾಯಗಳ ಪರಿಚಯವಿರಬೇಕು. ಇದರ ವ್ಯಾಪ್ತಿ ಮತ್ತು ವಿಸ್ತಾರ ಜೀವನದ ಸರ್ವಸ್ವವನ್ನ ಒಳಗೊಳಬಲ್ಲ ಇದರ ಶಕ್ತಿಯನ್ನು ಬಹುಶಃ ಕಾವ್ಯದ ಇನ್ನಾವ ಪ್ರಕಾರದಲ್ಲೂ ಕಾಣಲಾರೆವು.

"ಮಹಾಕಾವ್ಯ ಅನೇಕ ಸರ್ಗಗಳಿಂದ ಕೂಡಿದ್ದು; ಅದು ಮಹಾಪುರುಷರನ್ನ ಕುರಿತಿರುವುದಲ್ಲಿದೆ. ಪರಿಮಾಣದಲ್ಲಿಯೂ ಮಹತ್ತಾಗಿರುವುದು ಶಬ್ದಗಳಲ್ಲಿ ಅಗ್ರಾಮ್ಯತೆ, ಅರ್ಥದಲ್ಲಿ

---

[1] ಡಾ॥ ಹೆಚ್.ಜೆ. ಲಕ್ಕಪ್ಪ ಗೌಡ, 'ಮಹಾಕಾವ್ಯ' ಪುಟ ಸಂಖ್ಯೆ : 31

ಗುರುತ್ವಗಳನ್ನ ಹೊಂದಿರುತ್ತದೆ. ಅಲಂಕಾರಯುಕ್ತವಾಗಿರುತ್ತದೆ. ಉತ್ತಮ ವಸ್ತುವನ್ನ ಒಳಗೊಂಡಿರುತ್ತದೆ. ಅಥವಾ ಸತ್ಯ ಘಟನೆಗಳನ್ನ ಆಶ್ರಯಿಸಿರುತ್ತದೆ."[2]

"ಪ್ರಾರಂಭದ ಮಹಾಕಾವ್ಯಗಳು ಒಂದು ರೀತಿಯಲ್ಲಿ ವೀರ ಗೀತೆಗಳೂ ಆಗಿದ್ದುದು ಬಹುಶಃ ಇದಕ್ಕೆ ಕಾರಣವಿರಬಹುದು. ಆದರೆ ಮಹಾಕಾವ್ಯದ ಆ ನಂತರದ ಬೆಳವಣಿಗೆಯನ್ನ ಗಮನಿಸಿದರೆ 'ವೀರಗೀತೆ' ಗಳೆಲ್ಲವೂ ಮಹಾಕಾವ್ಯವಾಗಲಾರವೆನ್ನುವಷ್ಟರ ಮಟ್ಟಿಗೆ ಅದು ವಿಶಿಷ್ಟ ಲಕ್ಷಣಗಳನ್ನು ರೂಪಿಸಿಕೊಂಡುದು ಕಾಣಬಹುದು"[3]

ಪ್ರಾಚೀನ ಕಾಲದ ಕಥಾವಸ್ತು ವೀರನಾದ ವ್ಯಕ್ತಿಯು ಹೋರಾಟದ ಜೀವನದ ಘಟನೆ ಮೂಲ ವಸ್ತುವಾಗಿರುತ್ತದೆ. ನಾಯಕ ಉದಾತ್ತ ಗುಣವನ್ನು ಹೊಂದಿರುವ ವ್ಯಕ್ತಿ ವೀರನಾದರೂ ನ್ಯಾಯಕ್ಕೆ, ಸತ್ಯಕ್ಕೆ ತಲೆಬಾಗುವಂತವನು ಜೀವನ ಮೌಲ್ಯಗಳನ್ನ ರೂಪಿಸಿಕೊಂಡವನು ಆಗಿರುತ್ತಾನೆ. ವೀರನಾದ ವ್ಯಕ್ತಿ ಕಾವ್ಯದ ಪ್ರತಿನಾಯಕರಾದ ಸಮಾಜದ ಕಂಠಕರಾದವರನ್ನು ಸಂಹಾರ ಮಾಡಿ, ಸಮಾಜದ ನೆಮ್ಮದಿಯನ್ನು ಕಾಪಾಡುವುದು ಇವನ ಕೆಲಸವಾಗಿರುತ್ತದೆ. ನಾಯಕನಾದವನು ವೀರನಾಗಿರುವುದರ ಜೊತೆಗೆ ದೇವರ ಅನುಗ್ರಹಕ್ಕೆ ಪಾತ್ರನಾಗಿರುತ್ತಾನೆ. ಯಾವುದೇ ಕಷ್ಟಕರವಾದ ಕೆಲಸವನ್ನ ತನ್ನ ಸಾಹಸದಿಂದ ಮಾಡಿ ಮುಗಿಸಿ, ಜನತೆಯ ಒಳಿತನ್ನು ಕಾಪಾಡುವವನಾಗಿ, ದೇವರ ಗುಣವನ್ನ ಹೊಂದಿ, ಜನತೆಯಲ್ಲಿ ದೇವರ ಸ್ಥಾನ ಪಡೆಯುತ್ತಾನೆ. ಮಹಾಕಾವ್ಯಗಳು ಯಾವಾಗಲೂ ವೀರರ ಜೀವನ ಹೇಳುವಂತಹದ್ದು. ಮಹಾಕಾವ್ಯದಲ್ಲಿ ನಾಯಕನಾದವನಿಗೆ ಕೊನೆಗೆ ಜಯ ದೊರಕುವುದನ್ನು ಕಾಣಬಹುದಾಗಿದೆ. ಇತಿಹಾಸದಿಂದ ವಸ್ತುವನ್ನ ಪಡೆದುಕೊಂಡಿರುತ್ತದೆ. ಆದರೆ ಕವಿಕಲ್ಪಿತವಾದ ಕಥೆಗೂ ಅವಕಾಶ ಉಂಟು "ವ್ಯಕ್ತಿ ನಿಷ್ಠ ಕಾವ್ಯದಲ್ಲಿ ಕವಿಯ ವ್ಯಕ್ತಿತ್ವ ಪ್ರಧಾನ: ವಸ್ತು ನಿಷ್ಟ ಕಾವ್ಯದಲ್ಲಿ ಅವನದು ಕೃತಿ ಸಮರ್ಪಿತ ವ್ಯಕ್ತಿತ್ವ ಆದ್ದರಿಂದ ಅದು ವಸ್ತು ಪ್ರಧಾನ; ಈ ವಸ್ತುನಿಷ್ಟ ಕಾವ್ಯದ ಪರಮ ಪ್ರತೀಕ ಮಹಾಕಾವ್ಯದ ಉದ್ದೇಶ ಹಾಗೂ ಪರಿಣಾಮ ವ್ಯಾಪಕವಾದದು ಸುದೀರ್ಘವಾದುದು. ಸಾರ್ವಕಾಲಿಕವಾದುದು".[4]

ಕ್ರಿಯಾ ಪೂರ್ಣವೂ, ವೈಭವ ಪೂರ್ಣವೂ ಆದ ಘಟನಾ, ಪದನಾಮಗಳಿಂದ ಕೂಡಿದ ಮಹಾಕಾವ್ಯದಲ್ಲಿ ನಾಯಕನನ ಹುಟ್ಟಿನಿಂದ ಸಾಯುವವರೆಗೆ ಜೀವನದ ಮಜಲುಗಳನ್ನ ಸಾರ್ವಕಾಲಿಕ ಮೌಲ್ಯಗಳು ಬಿತ್ತರವಾಗುವಂತೆ ಚಿತ್ರಿಸಿರುತ್ತದೆ.

---

2 ಡಾ॥ ಹೆಚ್. ತಿಪ್ಪೆರುದ್ರಸ್ವಾಮಿ, 'ಮಹಾಕಾವ್ಯದ ಸ್ವರೂಪ ' ಪುಟ ಸಂಖ್ಯೆ : 56

3 ಡಾ॥ ಹೆಚ್. ತಿಪ್ಪೆರುದ್ರಸ್ವಾಮಿ, 'ಮಹಾಕಾವ್ಯದ ಸ್ವರೂಪ ' ಪುಟ ಸಂಖ್ಯೆ : 59

4 ಡಾ॥ ಹೆಚ್.ಕೆ. ಲಕ್ಕಪ್ಪಗೌಡ ಪುಟ ಸಂಖ್ಯೆ : 27

ಮಹಾಕಾವ್ಯಗಳೇ ನಿಜವಾದ ಅರ್ಥದಲ್ಲಿ ನಮ್ಮ ಸಂಸ್ಕೃತಿಯ ಇತಿಹಾಸವನ್ನು ನಿರೂಪಿಸುವ ಮುಖ್ಯ ಸಂಗತಿಗಳು ಮಹಾಕಾವ್ಯವು ಒಂದು ಜನಾಂಗದ ಸಮುದಾಯ ಪ್ರಜ್ಞೆಯನ್ನ ಸಾರುವಂತಹದ್ದು, ಒಂದು ಇಡೀ ಜನಾಂಗದ ಸೃಷ್ಟಿಯಾಗಿ, ಒಂದು ಇಡೀ ಜನಾಂಗದ ಬಾಳು ಬದುಕು ಸಂಸ್ಕೃತಿ ಇತಿಹಾಸಗಳ ಪ್ರತೀಕವಾಗಿ, ಆ ಜನಾಂಗದ ಬದುಕಿಗೆ ಮಾರ್ಗದರ್ಶಕವಾಗಿ ಆದರ್ಶವಾಗಿ ಇರುವಂಥದ್ದು, ಅವರು ಯಾವ ನೀತಿ ನಿಯಮ ಅನುಸರಿಸುತ್ತಿದ್ದರು, ಒಟ್ಟು ಆಶಯವೇನು. ಎಂಬುದನ್ನು ತಿಳಿಯಬೇಕಾದರೆ ಆ ಕಾಲದ ಹಬ್ಬ – ಹರಿದಿನಗಳು, ರೂಢಿ ಸಂಪ್ರದಾಯಗಳು ನಂಬಿಕೆಗಳು, ಆಚರಣೆಗಳು, ವಿವಾಹ ಕ್ರಮ, ಹುಟ್ಟು ಸಾವು. ಮುಂತಾದವುಗಳನ್ನ ತಿಳಿಸಿರಬೇಕು. ಉದಾ :– ಬುಡಕಟ್ಟು ಜನಾಂಗವಾದ ಕಾಡುಗೊಲ್ಲರು ಸೂತಕದ ಸಂದರ್ಭದಲ್ಲಿ ಊರಿನಿಂದ ಹೊರಗೆ ಇರುವ ಸಂಪ್ರದಾಯವನ್ನ ಕಾಣುತ್ತೇವೆ. ಮಹಾಭಾರತದ ಕಾಲದಲ್ಲಿ ದ್ರೌಪತಿಯ ವಿವಾಹ ಕ್ರಮದಿಂದ ಅಲ್ಲಿ ಬಹು ಪತ್ನಿತ್ವ ರೂಢಿಯಲ್ಲಿತ್ತು ಎಂಬುವುದನ್ನ ತಿಳಿಯಬಹುದಾಗಿದೆ. ಹೀಗೆ ಮಹಾಕಾವ್ಯ ಅಲ್ಲಿಯ ಜನರ ಒಟ್ಟಾರೆ ಸಮುದಾಯದ ಪ್ರಜ್ಞೆಯನ್ನ ಪ್ರತಿಬಿಂಬಿಸುವ ಒಂದು ಕನ್ನಡಿಯಂತೆ ಇರಬೇಕು.

ಭಾಷೆ, ಸಾಹಿತ್ಯ, ರೀತಿ ನೀತಿಗಳು ಮತ್ತು ಕವಿ ಮನಸ್ಸಿನ ಪರಿಪಕ್ವತೆ ಸೂಚಿಸಬೇಕು. ಭಾಷೆಯು ಜನರ ಅಭಿವ್ಯಕ್ತಿ ಮಧ್ಯಮವಾಗಿರುವುದರಿಂದ ಆ ಕಾಲದ ಜನರ ಭಾಷೆಯನ್ನ ಪ್ರತಿಬಿಂಬಿಸಬೇಕು. ಆಯಾ ಕಾಲದಲ್ಲಿ ಯಾವ ಭಾಷೆ ಮಾತನಾಡುತ್ತಿದ್ದರು ಎಂಬುದನ್ನು ತೋರಿಸಬೇಕು. ಆಡು ಭಾಷೆಯೇ ಪ್ರೌಢ ಭಾಷೆಯೇ ಎಂಬುದಿರಬೇಕು. ಒಟ್ಟಿನಲ್ಲಿ ಆ ಕಾಲದ ಭಾಷೆಯನ್ನ ನಮಗೆ ತಿಳಿಸುತ್ತದೆ. ಮಹಾಕಾವ್ಯವು ಸಾಹಿತ್ಯ ರೂಪದಿಂದ ಕೂಡಿರುವುದರಿಂದ ಆ ಕಾಲದ ಸಾಹಿತ್ಯವನ್ನ ಅದು ಪ್ರತಿಬಿಂಬಿಸಬೇಕು. ಅಲ್ಲಿಯ ಜನರ ರೀತಿ ನೀತಿಗಳನ್ನ ಅದು ತೋರಿಸಿಕೊಡುತ್ತದೆ. ಆ ಕಾಲದಲ್ಲಿ ಯಾವ ರೀತಿ ಸಾಹಿತ್ಯ ಬಳಕೆಯಲ್ಲಿತ್ತು ಎಂಬುದು ಗೊತ್ತಾಗುವಂತಿರಬೇಕು. ಈ ಮಹಾಕಾವ್ಯ ಜನತೆಯ ಮನಸ್ಸನ್ನು ಆ ಕಡೆಗೆ ಎಳೆಯಬೇಕಾದರೆ ಕಾವ್ಯವು ಜನತೆಗೆ ಇಷ್ಟವಾಗುವ ರೀತಿಯ ವರ್ಣನೆಗಳನ್ನ ಹೊಂದಿರಬೇಕು. ಹೆಚ್ಚುಗಾರಿಕೆಯನ್ನ ಅದು ಬಳಸಿರಬೇಕು. ಕೇಳುವ ಜನಕ್ಕೆ ಮುದ ನೀಡುವುದರ ಜೊತೆಗೆ ಮನರಂಜನೆಯನ್ನ ನೀಡುವ ರೀತಿಯಲ್ಲಿ ಹೇಳಿರಬೇಕು. ಆದುದ್ದರಿಂದ ಇದನ್ನು ಕಟ್ಟುವ ಕವಿಯ ಮನಸ್ಸು ಪರಿಪಕ್ವತೆಯನ್ನ ಸಾಧಿಸಿರಬೇಕು. ಈ ಬಗೆಯ ಕಾವ್ಯದಲ್ಲಿ ಕವಿಯ ವ್ಯಕ್ತಿತ್ವದ ಪ್ರಭಾವವನ್ನ ನೇರವಾಗಿ ನಾವು ಕಾಣವುದು ತೀರ ಕಡಿಮೆ, ಅದಕ್ಕೆ ಕಾರಣ ಅಲ್ಲಿ ಕವಿಯ ವ್ಯಕ್ತಿತ್ವ

ಇಲ್ಲದಿರುವುದಿಲ್ಲ ಕಾವ್ಯದ ತುಂಬ ಕವಿಯ ವ್ಯಕ್ತಿತ್ವ ಹರಿದಿರುವುದರಿಂದ ಇದೇ ಕವಿಯ ವ್ಯಕ್ತಿತ್ವ ಎಂದು ಬೆರಳಿಟ್ಟು ತೋರಿಸುವುದು ಕಷ್ಟ.

"ಮಹಾಕಾವ್ಯದಲ್ಲಿ ಅತ್ಯುತ್ತಮವಾದ ಪದ್ಯ. ಉಜ್ವಲವಾದ ಭಾಷೆ, ಫಲವಾದ ವಸ್ತು ಮತ್ತು ಉದಾತ್ತ ಪಾತ್ರ ಇವುಗಳ ಸಮ್ಮಿಲನವಾಗಬೇಕು. ಅತ್ಯಂತ ಶ್ರೇಷ್ಠವಾದ ಗುಣ ಮೌಲ್ಯಗಳು ಮತ್ತು ಭವ್ಯ ಗಾಂಭೀರ್ಯ ಮನೆ ಮಾಡಿಕೊಂಡಿರಬೇಕು. ಸಮೃದ್ಧಿ, ವಿಸ್ತಾರ ಮತ್ತು ವ್ಯಾಪಕತೆಗಳಿರಬೇಕು. ಇದರಲ್ಲಿ ದುರಂತದ ಅಂಶವೂ ಸೇರಿರಬಹುದು. ಕಾವ್ಯದ ಎಲ್ಲಾ ಅಂಶಗಳು ಕವಿಯ ನಿಯಂತ್ರಣದಲ್ಲಿರಬೇಕು. ಏಕೆಂದರೆ ಕಾವ್ಯದ ಒಟ್ಟು ಪರಿಣಾಮವನ್ನ ಕಾಯ್ದುಕೊಂಡು ಹೋಗುವ ಮನಃಶಕ್ತಿ ಕವಿಗಿಲ್ಲಗಿದ್ದರೆ ಉದ್ದೇಶ ಸಫಲವಾಗುವುದಿಲ್ಲ. ತನ್ನ ಅಥವಾ ತನ್ನ ಸಮೀಪದ ಕಾಲದ ಜನ ಸಮುದಾಯದ ಭಾವನಗಳು ಅದರಲ್ಲಿ ಪ್ರತಿಬಿಂಬಿತವಾಗಿರಬೇಕು. ಸಮಕಾಲಿನ ಪ್ರಜ್ಞೆಯಂತೆಯೇ ಕಾಲಾತೀತವಾದ ಅಥವಾ ಸಾರ್ವಕಾಲಿಕವಾದ ಮೌಲ್ಯಗಳೂ ಅದರಲ್ಲಿ ಮಿಳಿತವಾಗಿರಬೇಕು. ಮಹಾಕಾವ್ಯದ ಸಾಮಾಗ್ರಿ ಬಹುಮಟ್ಟಿಗೆ ಸಾರ್ವಜನಿಕವಾಗಿರಬೇಕು "ಎಂದು ಟೆಲಿಯಾರ್ಡ್, ಮಹಾಕಾವ್ಯ ಲಕ್ಷಣದಲ್ಲಿ ಹೇಳಿದ್ದಾರೆಂದು ಮಹಾಕಾವ್ಯ ಒಂದು ಅವಲೋಕನದಲ್ಲಿ ಲಕ್ಕಪ್ಪ ಗೌಡರು ಹೇಳಿದ್ದಾರೆ." [5]

ಸಮಕಾಲೀನ ಪ್ರಜ್ಞೆಯನ್ನ ಗರ್ಭಿಕರಿಸಿಕೊಂಡು ಸಾರ್ವಕಾಲಿಕತೆಯನ್ನು ಪಡೆದುಕೊಳ್ಳಬೇಕು. ಜನ ಮಾನಸದಲ್ಲಿ ಅದು ಉಳಿಯಬೇಕು. ಎಂಬುದು ಎಲ್ಲರಿಗೂ ಒಗ್ಗುವ ಸಾರ್ವಕಾಲಿಕ ಸತ್ಯವನ್ನು ಸಾರುವಂತಹದ್ದು ಆಗಿರಬೇಕು. ಅದು ಯಾವ ಕಾಲಕ್ಕು ಸುಳ್ಳಾಗಬಾರದು, ಜನರಿಂದ ತಿರಸ್ಕೃತವಾಗಬಾರದು ಅದ್ದರಿಂದ ಮುಂದಿನ ಜನಾಂಗದವರಿಗೂ ಅರಿವು ತಿಳುವಳಿಕೆಯನ್ನು ನೀಡುವಂತಹದ್ದು, ಪ್ರಯೋಜನಕಾರಿಯು ಆಗಿರಬೇಕು. ಆಕಾಲದ ಎಲ್ಲಾ ವಿಷಯವನ್ನ ತಿಳಿಸುವಂತಹದ್ದು. ಸಮಕಾಲೀನದಲ್ಲಿಯೂ ಕೆಲವಾದರೂ ವಿಚಾರಗಳು ಅನುಸರಿಸುವ ರೀತಿಯಲ್ಲಿ ಇರಬೇಕು. ಮುಂದಿನ ಜನಾಂಗಕ್ಕೆ ಅದು ಒಳಿತು ಆಗಿರಬೇಕು. ಒಟ್ಟಿನಲ್ಲಿ ಆ ಕಾವ್ಯವು ಆ ಕಾಲದ ಸಂಪೂರ್ಣವಾದ ಪರಿಚಯವನ್ನ ಅಲ್ಲಿಯ ಜನರ ತಿಳುವಳಿಕೆ ಮಟ್ಟವನ್ನ ತಿಳಿಸುವಂತೆ ಇರಬೇಕು.

ಅತಿ ಮಾನುಷ್ಯ ಶಕ್ತಿಗಳ ಪವಾಡ ಪ್ರಭಾವ ಅನೇಕ ಸಂದರ್ಭದಲ್ಲಿ ನಾಯಕನಿಗೆ ಎದುರಾಗಿ ಮಹಾಕಾವ್ಯಗಳಲ್ಲಿ ಕಂಡು ಬರುತ್ತದೆ. ಈ ಪವಾಡವನ್ನ ನಾಯಕನಾದವನು ಮಾತ್ರ

---

[5] ಜಿ.ಎಸ್. ಭಟ್ಟ ಸಂಪಾದಿತ 'ಮಹಾಕಾವ್ಯ ಒಂದು ಅವಲೋಕನ' ಪುಟ ಸಂಖ್ಯೆ : 42

ಗೆಲ್ಲುತ್ತಾನೆ. ಸವಾಲಾದ ಪವಾಡವನ್ನ ಬಯಲು ಮಾಡುತ್ತಾನೆ. ಈ ಪವಾಡವನ್ನು ನಾಯಕನಾದವನು ಗೆಲ್ಲಲು ಬೇರೆ ಅತಿ ಮಾನುಷ ಶಕ್ತಿಗಳ ಸಹಾಯವನ್ನ ಕೆಲವು ಸಂದರ್ಭದಲ್ಲಿ ಪಡೆಯುತ್ತಾನೆ. ಪವಾಡಗಳನ್ನ ಬಯಲು ಮಾಡದಿದ್ದರೆ ಅವನ ಸಾಹಸಗಳು ನಿರರ್ಥಕವಾಗುತ್ತದೆ. ಅಪಾಯದಿಂದ ಪಾರಾಗಲು ನಾಯಕ ಅಸಾಧ್ಯವಾದ ಕೆಲಸಗಳನ್ನ ಸಾಧಿಸಬೇಕು. ಅನೇಕ ಅಪಾಯಗಳಿಂದ ನಾಯಕ ಪಾರಾಗಲು ದೇವರ ಸಹಾಯವು ಸಹ ಆತನಿಗೆ ದೊರೆಯುತ್ತದೆ. ಅವರುಗಳ ಸಹಾಯದಿಂದ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುತ್ತಾನೆ. ಮಹಾಕಾವ್ಯದಲ್ಲಿ ನಾಯಕವಾದವನು ಉದಾರಿಯೂ, ಶೂರನು, ಚಾಣಾಕ್ಷನು ಆಗಿದ್ದು ದೇವರ ಗುಣಗಳನ್ನು ಅವಳವಡಿಸಿಕೊಂಡಿರುವ ಮಾನವನಾಗಿದ್ದು ಅವನ ಪಾತ್ರವನ್ನ ವಿಶೇಷವಾಗಿ ಚಿತ್ರಿಸಿರಬೇಕು. ಅವರ ರೂಪ, ಲಾವಣ್ಯ, ಗುಣವನ್ನ ವರ್ಣನೆ ಮಾಡಿ ತೋರಿಸಬೇಕಾಗುತ್ತದೆ. ಅನೇಕಾರು ಪಾತ್ರಗಳನ್ನು ವರ್ಣನೆ ಮೂಲಕ ಪರಿಚಯ ಮಾಡಿಕೊಳ್ಳಲಾಗುತ್ತದೆ. ಜನತೆಯಲ್ಲಿ ಪ್ರತಿ ನಾಯಕನು ಖಳ ನಾಯಕನಾಗಬೇಕಾದರೆ ಅವನಲ್ಲಿ ಅವಗುಣಗಳು ಇರುತ್ತದೆ. ಅವಗುಣಗಳ ರೀತಿಯಲ್ಲಿ ಅವನಲ್ಲಿ ಒಳ್ಳೆಯ ಗುಣಗಳು ಸಹ ಇವೆ. ಉದಾ: – ಮಹಾಭಾರತದ ದುರ್ಯೋಧನ ಮೂಲದಲ್ಲಿ ದೃಷ್ಟನಾಗಿ ಕಂಡು ಬಂದರು ಕುಮಾರ ವ್ಯಾಸದ ಕಾವ್ಯದಲ್ಲಿ ಅವನ ಒಳ್ಳೆಯ ಗುಣಗಳನ್ನ ಎತ್ತಿಹಿಡಿದು ಪ್ರೀತಿಯಿಂದ 'ಸುಯೋಧನ' ಎಂದು ಕರೆಸಿಕೊಂಡಿರುವುದನ್ನ ನೋಡಬಹುದು. ಹಾಗೆಯೇ ರಾಮಾಯಣದಲ್ಲಿ ಸೀತೆಯನ್ನ ಬಲತ್ಕಾರ ಮಾಡಬಹುದಿತ್ತು ರಾವಣ, ಹಾಗೇ ಮಾಡದೆ ಒಲಿದು ಬರಲಿ ಎಂದು ಕಾದಿದ್ದು, ರಾಮನಿಗೆ ಕಂಕಣವನ್ನು ಕಟ್ಟಿ ಆರ್ಶೀವಾದ ಮಾಡಿದ್ದು.

"ಮಹಾಕಾವ್ಯವು ನಾಟಕದಂತೆ ಇರುವುದಿಲ್ಲ. ನಟರು ಇರುವುದಿಲ್ಲ ಹಿನ್ನಲೆಯ ದೃಶ್ಯಗಳು ಇಲ್ಲ ಆದರೆ ಅವೆಲ್ಲವುಗಳನ್ನ ಕಾವ್ಯದಲ್ಲಿ ತುಂಬಿ ಕೊಡುವ ಹೊಣೆ ಕವಿಯದು ಮಹಾಕಾವ್ಯದಲ್ಲಿ ನಾಟಕೀಯವಾದ ಸಂಭಾಷಣೆಗಳನ್ನ ಸನ್ನಿವೇಶಗಳನ್ನ ತರುವುದು ಅನಿವಾರ್ಯ, ಕಣ್ಣೆದುರು ನಡೆಯದಿದ್ದರೂ ನಮ್ಮ ಮನೋಭಿತ್ತಿಯ ಮೇಲೆ ಅವು ನಡೆಯುತ್ತಿರುವಂತೆ ಓದುಗರು ಕಲ್ಪಿಸಿಕೊಳ್ಳಲು ಸಾಧ್ಯವಾಗುವ ರೀತಿಯಲ್ಲಿ ಕವಿ ಅವುಗಳನ್ನ ಅಳವಡಿಸಿಕೊಳ್ಳುವುದು ಅಗತ್ಯ"[6]

ಮಹಾಕಾವ್ಯ ರಸಾನುಗುಣವಾಗಿ ಬರೆಯಬೇಕಾದರೆ ಮಹಾಕಾವ್ಯವೆಂದರೇನು? ಎಂಬ ಬಗ್ಗೆ ಮೊದಲು ಪ್ರಸ್ತಾಪ ಮಾಡಿದನು ಎಂದರೆ ಅರಿಸ್ಟಾಟಲ್, ಅವನ ಪ್ರಕಾರ "ಮಹಾಕಾವ್ಯವು ಪ್ರೌಢವಾದ ಛಂದಸ್ಸಿನಲ್ಲಿ ಉದಾತ್ತ ವ್ಯಕ್ತಿಗಳ ಅನುಕರಣವಾಗಿರುವಷ್ಟರ ಮಟ್ಟಿಗೆ ರುದ್ರನಾಟಕವನ್ನು

[6] ಹೆಚ್.ಜೆ. ಲಕ್ಕಪ್ಪಗೌಡರ 'ಮಹಾಕಾವ್ಯ' ಥಾಮಸ್‌ರವರ ಹೇಳಿಕೆ, ಪುಟ ಸಂಖ್ಯೆ : 29

ಹೋಲುತ್ತವೆ ಎಂದಿದ್ದಾನೆ ಮಹಾಕಾವ್ಯ ಒಂದೇ ಬಗೆಯ ಛಂದಸ್ಸಿನಿಂದ ಕೂಡಿದ್ದು ಕಥನ ರೂಪದಲ್ಲಿರಬೇಕು ಅವರ ವೈಶಾಲ್ಯದಲ್ಲೂ ಭಿನ್ನವಾಗಿದೆ. ಅವರ ಕಾರ್ಯಕ್ಕೆ ಕಾಲದ ನಿಶ್ಚಿತವಾದ ಅವಧಿಯೇನೂ ಇರುವುದಿಲ್ಲ.

ಮಹಾಕಾವ್ಯ ವಸ್ತು ನಿಷ್ಠ ಕಾವ್ಯ ಎಂದು ಪಾಶ್ಚಾತ್ಯಾರು ಕರೆದಿದ್ದಾರೆ. ಆದ್ದರಿಂದ ವಸ್ತು ನಿಷ್ಠ ಕಾವ್ಯದಲ್ಲಿ ಅವನದು (ಕವಿಯದು) ಕೃತಿ ಸಮರ್ಪಿತ ವ್ಯಕ್ತಿತ್ವ ಆದ್ದರಿಂದ ಅದು ವಸ್ತು ಪ್ರಧಾನ ಈ ವಸ್ತು ನಿಷ್ಠೆ ಕಾವ್ಯದ ಪರಮ ಪ್ರತೀಕವೆ ಮಹಾಕಾವ್ಯ, ಮಹಾಕಾವ್ಯದ ಗಾತ್ರ ಹಿರಿದು, ದೀರ್ಘವಾದ, ಗಟ್ಟಿಯಾದ ಕಥೆ, ಹತ್ಸಾರು ಪ್ರಮುಖ ಘಟನೆಗಳು, ನೂರಾರು ಪಾತ್ರಗಳು, ಹತ್ತಾರು ಪರಿಸರಗಳು ಹಾಗೂ ಸಾವಿರಾರು ಭಾವನೆಗಳು ಇವುಗಳ ಮಹಾ ಸಂಗಮವೇ.

ಮಹಾಕಾವ್ಯದ ಉದ್ದೇಶ ಹಾಗೂ ಪರಿಣಾಮ ವ್ಯಾಪಕವೂ, ಸುದೀರ್ಘವೂ ಸಾರ್ವಕಾಲಿಕವೂ ಆದದ್ದು, ಮಹಾ ಕೃತಿಕಾರನಿಗೆ ಜನ ಜೀವನದ ಆಳವಾದ ಅರಿವು, ವ್ಯಾಪಕವಾದ ವ್ಯಾಸಂಗ ನಿಶ್ಚಿತ ಚಿಂತನೆ, ಪ್ರತಿಭಾ ಶಕ್ತಿಯನ್ನು ದೀರ್ಘಕಾಲದವರೆಗೆ ಧಾರಣ ಮಾಡುವ ಅದ್ಭುತ ಶಕ್ತಿ ಇರಬೇಕಾಗುತ್ತದೆ. ಮಹಾಕಾವ್ಯ ಒಂದು ಸಾಗರ, ಮಹಾಕೃತಿ (ಕಾವ್ಯ) ನಮ್ಮ ಇಡೀ ವ್ಯಕ್ತಿತ್ವವನ್ನು ಆವರಿಸುವ, ಆಕ್ರಮಿಸುವ ಔನ್ನತ್ಯಕ್ಕೇರಿಸುವ ಶಿವ ಪರವಾಗಿಸುವ ದಿವ್ಯಭವ್ಯ ಪ್ರಭಾ ಪ್ರವಾಹ.

ಮಹಾಕಾವ್ಯಗಳಲ್ಲಿ ಶಿಷ್ಟ ಮಹಾಕಾವ್ಯ, ಮೌಖಿಕ ಮಹಾಕಾವ್ಯ ಎಂಬ ಎರಡು ವಿಧ ನಮ್ಮ ಶಿಷ್ಟ ಕಾವ್ಯಗಳಾದ ರಾಮಾಯಣ, ಮಹಾಭಾರತಗಳೆ ಮಹಾಕಾವ್ಯಗಳು ಇವು ಜನಪದದಲ್ಲಿ ಇಲ್ಲ ಎನ್ನುವ ಭಾವನೆ ಜನತೆಯಲ್ಲಿ ಮನೆ ಮಾಡಿಕೊಂಡಿತ್ತು. ಆದರೆ ಜನಪದ ಮಹಾಕಾವ್ಯವೆಂದರೆ ಅದೊಂದು ಮೌಖಿಕ ಪರಂಪರೆಯಿಂದ ಬಂದುದಾಗಿದ್ದು ಜನ ಸಾಮಾನ್ಯರ ಪರವಾದುದ್ದಾಗಿದೆ.

ಹಿ.ಚಿ. ಬೋರಲಿಂಗಯ್ಯನವರು ಜುಂಜಪ್ಪ ಕಾವ್ಯಕ್ಕೆ ಪ್ರಸ್ತಾವನೆ ಬರೆಯುತ್ತಾ "ಸಿ.ಎಂ.ಬೋವ್ರ ನಂಥ ಒಬ್ಬ ಪ್ರಮುಖ ವಿದ್ವಾಂಸ ಈ ಎರಡು ಬಗೆಯ ಮಹಾಕಾವ್ಯಗಳಲ್ಲಿ ವಾಚನ ಮಹಾಕಾವ್ಯವೇ ಶುದ್ಧವಾದ ಸಹಜ ಸ್ಫೂರ್ತವಾದ, ನೇರವಾದ, ನಿರರ್ಗಳವಾದ ನಾಗರೀಕತಯಿಂದ ಕಲುಷಿತವಾಗದ ಕವಿಯವಾಣಿ[7] ಎಂದು ಘೋಷಿಸಿದರು ಎಂದು ಹೇಳುತ್ತಾ ಮಹಾಕಾವ್ಯವೆಂದರೆ ಅದು ನೂರಾರು ಘಟನೆಗಳ ಮೊತ್ತವಾದ್ದರಿಂದ ಅಕ್ಷರ ಬಲ್ಲವರು ಮಾತ್ರ. ಅಂಥದ್ದನ್ನು ರಚಿಸಬಲ್ಲರೆಂಬ ತಿಳುವಳಿಕೆಯೂ ಈ ನಿರ್ಲಕ್ಷಕ್ಕೆ ಕಾರಣಗಳನ್ನು ಪವಾಡ

---

[7] ಹಿ.ಚಿ. ಬೋರಲಿಂಗಯ್ಯ, ಜುಂಜಪ್ಪನ 'ಮಹಾಕಾವ್ಯ' ಪ್ರಸಾವನೆ

ಪುರುಷರು, ಬೈರಾಗಿಗಳೂ, ಸಾಧಕರ ಮಹಿಮೆಗಳನ್ನ ಅವರ ಜೀವನ ಪ್ರೀತಿಯ ವಿಶೇಷಗಳೆನಿಸಿದ ಮದ್ಯ, ಮಾಂಸ ಮೈಥುನ, ಭಂಗಿ ಸೇವನೆಯಂಥ ನಿರಾಕರಿಸಲಾಗದ ವಿಚಾರಗಳನ್ನ, ಸ್ತ್ರೀ ಪ್ರಧಾನವಾದ ದ್ರಾವಿಡ ಮೂಲ ಮೌಲ್ಯಗಳನ್ನು ಹಾಗೂ ಈ ಮೂಲಕ ತಮ್ಮದೇ ನೆಲದ ಗುಣವನ್ನು ಸಹಜವಾಗಿ ಹೊರ ಸೂಸುವ ದೀರ್ಘಕಥಾನಕಗಳು ನಮ್ಮಲ್ಲಿವೆ. ಈ ಕಥನಗಳೇ ನಿಜವಾದ ಅರ್ಥದಲ್ಲಿ ನಮ್ಮ ಸಂಸ್ಕೃತಿಯ ಇತಿಹಾಸವನ್ನ ನಿರೂಪಿಸಬಲ್ಲ ಶಕ್ತಿ ಪಡೆದವುಗಳು"[7]

ನಮ್ಮ ನಾಡಿನ ಸಾಂಸ್ಕೃತಿಕ ಪುರಾಣ ಎಂದರೆ ಅದು ಕೇವಲ ರಾಮಾಯಣ ಮಹಾಭಾರತಗಳ ಪುರಾಣ ಎಂಬ ಸಾರ್ವತ್ರಿಕ ಅಭಿಪ್ರಾಯವಿರುವ ಈ ಸನ್ನಿವೇಶದಲ್ಲಿ, ಬುಡಕಟು ಮಹಾಕಾವ್ಯಗಳ ಮೂಲಕ ಕನ್ನಡ ಸಂಸ್ಕೃತಿಯನ್ನ ಹುಡುಕುವ ಕಾರ್ಯಕ್ಕೆ ನಾವು ಕೈ ಹಾಕಿದ್ದೇವೆ. ಮಾತೆತ್ತಿದರೆ, ಭಾರತೀಯ ಸಂಸ್ಕೃತಿ ಎಂದು ಸಾರ್ವತ್ರಿಕರಿಸುವ ಭ್ರಮೆಯಿಂದ ಹೊರ ಬಂದು ಪ್ರತಿಯೊಂದು ಭಾಷೆಯ ನೆಲಕ್ಕು ತನ್ನದೆಯಾದ ವೈಶಿಷ್ಯತೆ ಇದೆ. ತನ್ನದೇ ಆದ ಸಂಸ್ಕೃತಿ ಇದೆ ಎಂಬ ವಾಸ್ತವದ ನೆಲೆಯಲ್ಲಿ, ನೆಲದ ಗುಣ ಹುಡುಕುವ ಕಾರ್ಯಕ್ಕೆ ನಾವೀಗ ಮುಂದಾಗಬೇಕಿದೆ. ಅಖಿಲ ಭಾರತೀಯ ಮಟ್ಟದ ರಾಮ, ಕೃಷ್ಣ, ಶಿವ ಅಥವಾ ಒಂದು ಬುಡಕಟ್ಟಿನ ಪರಂಪರೆಯಲ್ಲಿ ಸೃಷ್ಟಿಯಾಗಿರುವ ದೈವ ಪುರುಷರು ಇವತ್ತಿನ ಸಂಸ್ಕೃತಿ ಚಿಂತಕರಿಗೆ ಮುಖ್ಯವಾಗಬೇಕಾಗಿದೆ. ಕಾಡು ಮತ್ತು ನಾಡಿನ ಹತ್ತಾರು ಜನ ವರ್ಗಗಳು ಪೂಜಿಸುವ ದೈವಗಳು ಮತ್ತು ಆ ದೈವಗಳ ಬಗ್ಗೆ ಅವರು ಕಟ್ಟಿಕೊಂಡ ಕಥನಗಳು ನೂರಾರು ಈ ಕಥನಗಳೇ ನಿಜವಾದ ಅರ್ಥದಲ್ಲಿ ನಮ್ಮ ಸಂಸ್ಕೃತಿಯ ಇತಿಹಾಸವನ್ನ ನಿರೂಪಿಸ ಬಲ್ಲ ಮುಖ್ಯ ಸಂಗತಿಗಳು. ಈ ಕಥನಗಳನ್ನ ಅಭ್ಯಾಸಿಸುವುದರಿಂದ ಭಾರತ ಇದುವರೆಗಿನ ವ್ಯವಸ್ಥೆಯಲ್ಲಿ ನಿರ್ಲಕ್ಷಿಸಲ್ಪಟ್ಟ ಜನ ವರ್ಗಗಳಿಗೆ ಕೂಡ ಒಂದು ಶ್ರೀಮಂತ ಸಂಸ್ಕೃತಿ ಇದೆ ಎಂಬುದನ್ನ ಆ ಸಂಸ್ಕೃತಿಗೆ ಒಂದು ಪರಂಪರೆ ಇದೆ ಎಂಬುದನ್ನ ಆ ಪರಂಪರೆಯೇ ಒಂದು ನಾಡಿನ ವಿವೇಕ ಮತ್ತು ಜ್ಞಾನವನ್ನ ಕಾಪಾಡಿಕೊಂಡು ಬಂದಿದೆ.[8]

ನಮ್ಮ ನಾಡಿನ ಸಂಸ್ಕೃತಿಯನ್ನ ಪ್ರತಿಬಿಂಬಿಸುವವರು ಕೇವಲ ರಾಜ ಮಹಾರಾಜರೆ ಅಲ್ಲ, ಜನ ಸಾಮಾನ್ಯರು ಸಹ ತಮ್ಮ ಶಕ್ತಿ ಸಾಹಸ ಪವಾಡಗಳ ಮೂಲಕ ಈ ನೆಲದ ಸಂಸ್ಕೃತಿಯನ್ನ ಸಾರಿದ್ದಾರೆ. ಅವರುಗಳು ಮಲೆಮಹದೇಶ್ವರ, ಮಂಟೇಸ್ವಾಮಿಯಾಗಿರಬಹುದು, ಮೈಲಾರ ಲಿಂಗನಾಗಿರಬಹುದು, ಜುಂಜಪ್ಪನಾಗಿಯೂ ಇರಬಹುದು. ಇವರು ಸಹ ಅನೇಕ ಪವಾಡಗಳನ್ನ

---

[8] ಡಾ॥ ಚಂದ್ರಶೇಖರ್ ಕಂಬಾರ 'ಜುಂಜಪ್ಪ ಮಹಾಕಾವ್ಯದ' ಮುನ್ನುಡಿ

ಮಾಡಿ ಜನ ಸಾಮಾನ್ಯರಲ್ಲಿ ಅಸಮಾನ್ಯರು ಎನಿಸಿಕೊಂಡಿರುವುದನ್ನ ನೋಡಬಹುದಾಗಿದೆ. ಅವರ ವ್ಯಕ್ತಿತ್ವಕ್ಕೆ ದಕ್ಕೆ ಬಂದಾಗ ತಿರುಗಿ ಬಿದ್ದು ತಮ್ಮತನವನ್ನ ಕಾಪಾಡಿಕೊಂಡಿರುವುದನ್ನ ನೋಡುತ್ತೇವೆ. ಶಿಷ್ಟ ನಾಯಕನಂತೆ ನಂಬಿ ಬಂದವರನ್ನ ಕಾಪಾಡುವುದನ್ನು ಇಲ್ಲಿಯಾ ಕಾಣಬಹದು ಶಿಷ್ಟ ನಾಯಕರು ಹೇಗೆ ಆ ಒಂದು ಜನಾಂಗದ ಸಂಸ್ಕೃತಿಯಲ್ಲಿ ದೇವರಾಗುವರೂ ಹಾಗೇಯೇ ಇವರ ಜನಾಂಗದಲ್ಲಿ ಇವರು ದೇವರಾಗಿ ಪೂಜೆಗೆ ಅರ್ಹರಾಗಿರುವುದನ್ನ ಇದರಲ್ಲಿ ಕಾಣಬಹುದು. ಒಟ್ಟಾರೆಯಾಗಿ ಶಿಷ್ಟ ಮಹಾಕಾವ್ಯಕ್ಕಿಂತ ಯಾವುದೇ ರೀತಿಯಲ್ಲಿಯು ಕಡಿಮೆ ಇಲ್ಲದಂತಹ ಉದಾತ್ತ ಗುಣ ಜೀವನ ಮೌಲ್ಯಗಳನ್ನು ನಾವು ಇಲ್ಲಿಯು ನೋಡಬಹುದಾಗಿದೆ. ಜನಪದ ಮಹಾಕಾವ್ಯದಲ್ಲಿ ಆಡು ಭಾಷೆಯ ಸೊಗಡನ್ನು ಉಳಿಸಿಕೊಂಡು ಬಂದಿರುವುದನ್ನು ಸಹಜ ಘಟನೆಗಳ ರೀತಿಯಲ್ಲಿ ಸರಳವಾಗಿ ಅರ್ಥವಾಗುವುದನ್ನ, ರಾಜ ಮಹಾರಾಜರಲ್ಲದಿದ್ದರೂ ಸಾಮಾನ್ಯರಾಗಿ ಹುಟ್ಟಿ ಅಸಮಾನ್ಯರಾಗಿ ಮರೆದಿದ್ದನ್ನು ಕಾಣಬಹುದಾಗಿದೆ. ಇಂತಹ ಎಲ್ಲಾ ಮಹಾಕಾವ್ಯದ ಲಕ್ಷಣವನ್ನು ಹೊಂದಿರುವ ಜನಪದ ಕಾವ್ಯವನ್ನು ಮಹಾಕಾವ್ಯ ಎಂದು ಕರೆಯಬಹುದಾಗಿದೆ.

ಒಟ್ಟಿನಲ್ಲಿ ಜನಪದ ಕವಿಗಳು ತನ್ನದಲ್ಲದ ಸಂಸ್ಕೃತಿಯ ಬಗ್ಗೆ ಹೇಳದೆ ತಮ್ಮ ಸುತ್ತಾಮುತ್ತ ನಡೆಯುವುದನ್ನು ಸರಳವಾಗಿ ವಿಶಿಷ್ಟವಾಗಿಯು ಹೇಳಿರುವುದನ್ನು ಕಾಣಬಹುದು. ಜನಪದ ಮಹಾಕಾವ್ಯಗಳಲ್ಲಿ ಕಥಾನಾಯಕರು ಪವಾಡ ಪುರುಷರು ಅನೇಕಾರು ಪವಾಡಗಳನ್ನು ಜನತೆಯ ಒಳಿತಿಗಾಗಿ ಮಾಡಿದವರು, ತಮ್ಮ ಕಾವ್ಯದಲ್ಲಿ ತಮ್ಮವರಲ್ಲದ ನಾಯಕರ ಕತೆಗಳನ್ನು ಅವರು ಸೇರಿಸಿಕೊಂಡಿಲ್ಲ. ರಾಮಾಯಣ. ಮಹಾಭಾರತದ ಉದಾಹರಣೆಗಳನ್ನು ಅವರು ತೆಗೆದುಕೊಂಡಿಲ್ಲ. ತಮಗೆ ಎಷ್ಟು ಸಾಧ್ಯವೂ ಅಷ್ಟನ್ನು ಅವರು ಕಟ್ಟಿಹಾಡಿದರು. ತಮ್ಮ ನೆಲದ ಸೊಬಗನ್ನು ಮಹಿಮೆಯನ್ನು ತನ್ನ ಕುಲದ ಹೆಚ್ಚುಗಾರಿಕೆಯನ್ನು ಮರೆಸಿರುವುದನ್ನು ಕಾಣಬಹುದಾಗಿದೆ. ತನ್ನದೆಯಾದ ಬುಡಕಟ್ಟಿನಲ್ಲಿ ತಮ್ಮ ಕಾವ್ಯ ಹೇಳಿದವರು ಬುಡಕಟ್ಟಿನ ದೇವರ ಬಗ್ಗೆ ಹೇಳಿದ್ದಾರೆ. ಅವರಲ್ಲಿ ಸಾಮಾನ್ಯರಾಗಿ ಹುಟ್ಟಿದ ಇವರು ಜನ ಸಾಮಾನ್ಯರ ದೃಷ್ಟಿಯಲಿ ಇಂದು ದೇವರಾಗಿರುವುದನ್ನು ಕಾಣಬಹುದು. ಜನಪದ ಮಹಾಕಾವ್ಯಗಳಲ್ಲಿ ಅವರ ಬುಡಕಟ್ಟಿನ ವರ್ಣನೆ ಇಷ್ಟ ದೈವದ ವರ್ಣನೆ, ಅವರ ಪವಾಡಗಳ ವರ್ಣನೆ ಮಾಡಿರುವುದನ್ನು ಕಾಣಬಹುದು, ಇವರು ನಂಬಿಕೆ ಸಂಪ್ರದಾಯಗಳಿಗೆ ಒಳ್ಳೆಯ ಬೆಲೆ ಕೊಡುವುದನ್ನು ನೋಡಬಹುದಾಗಿದೆ.

ಕನ್ನಡ ಜನಪದ ಮಹಾಕಾವ್ಯಗಳಲ್ಲಿ

1. ಮಲೆಯ ಮಹಾದೇಶ್ವರ
2. ಮಂಟೇಸ್ವಾಮಿ
3. ಮೈಲಾರ ಲಿಂಗ
4. ಜುಂಜಪ್ಪ

ಮುಂತಾದವುಗಳನ್ನು ಕಾಣಬಹುದಾಗಿದೆ.

ಮಲೆಯ ಮಹಾದೇಶ್ವರ ಕಾವ್ಯಕ್ಕೆ ಒಂದು ಮಹತ್ವದ ಸ್ಥಾನವಿರುವುದನ್ನು ಕಾಣಬಹುದಾಗಿದೆ. ಈ ಕಾವ್ಯವನ್ನು ಕಂಸಾಳೆ ದೇವರ ಗುಡ್ಡರು ಹಾಡುತ್ತಾರೆ. ಒಟ್ಟಲಿನ ಆಕಾರದ ಕಂಸಾಳೆಯು ಇವರ ಹಾಡುಗಾರಿಕೆಗೆ ಅನುಗುಣವಾಗಿ ಒಳಸಲ್ಪಡುವ ವಿಶಿಷ್ಟ ಸಾಧನ ಹಾಗೂ ಇವರಿಗೆ ಇದು ಪೂಜ್ಯವಾದ ವಸ್ತುವಾಗಿದೆ. ಮಹಾಕಾವ್ಯ ದೊಡ್ಡದಾಗಿರುವುದರಿಂದ ಇದರ ಭಾಗಗಳು ಸುವಿಸ್ತಾರದಿಂದ ಕೂಡಿರುವುದರಿಂದ ಒಂದೊಂದು ರಾತ್ರಿ ಒಂದೊಂದು ಕಥಾನಕವನ್ನು ಮಾಡುವುದನ್ನು ಕಾಣಬಹುದು. ಈ ಕಾವ್ಯದ ಹಾಡುಗಾರಿಕೆಯನ್ನು ಸಾಮಾನ್ಯವಾಗಿ ರಾತ್ರಿ ವೇಳೆಯಲ್ಲೆ ನಡೆಸುತ್ತಾರೆ. ಜಾತ್ರೆ, ಉತ್ಸವ ಸಂದರ್ಭದಲ್ಲಿ ಹಗಲು ವೇಳೆಯ್ಲಲಿ ಹಾಡುವುದು ಉಂಟು. ಈ ಕಾವ್ಯದಲ್ಲಿ ಹಲವು ಸಾಲುಗಳು ಇರುವುದನ್ನು ನೋಡಬಹುದು. ಇವುಗಳಲ್ಲಿ ಸಂಕಮ್ಮನ ಸಾಲು, ಬೇವಿನಕಾಳಿ ಸಾಲು, ಇಕ್ಕೇರೆ ದೇವಮ್ಮನ ಸಾಲು, ಜುಂಜೇಗೌಡನ ಸಾಲು, ಇನ್ನು ಕೆಲವು ಸಾಲುಗಳನ್ನು ಹೊಂದಿದೆ. ಪ್ರತಿಯೊಂದು ಸಾಲುಗಳು ಸ್ವತಂತ್ರವಾದ ಒಂದು ಖಂಡ ಕಾವ್ಯದ ರೀತಿಯಲ್ಲಿ ಇರುವುದನ್ನು ಕಾಣಬಹುದಾಗಿದೆ. ಮಲೆಯ ಮಹಾದೇಶ್ವರ ಕಾವ್ಯ ಮೌಖಿಕ ಪರಂಪರೆಯಲ್ಲಿ ಉಳಿದು ಬಂದಿರುವ ಜಗತ್ತಿನ ಶೇಷ್ಠ ಕಾವ್ಯಗಳಲೊಂದು ಎಂದು ಹೆಸರನ್ನ ಪಡೆದು ಕೊಂಡಿರುವುದನ್ನ ಕಾಣುತ್ತೇವೆ.

ನಾಯಕ ಪ್ರಧಾನವಾದ ಈ ಮಹಾಕಾವ್ಯದ ನಾಯಕ ಸಂದರ್ಭ ಸನ್ನಿವೇಶಕ್ಕೆ ತಕ್ಕಂತಹ ಪವಾಡಗಳನ್ನು ಮಾಡುತ್ತಾನೆ. ಈ ನಾಯಕ ಸ್ಥಳೀಯ ವಾದುದ್ದರಿಂದ ಈ ವೀರನ ಶಕ್ತಿ, ಸಾಹಸ ಕಾರ್ಯ ಪ್ರದರ್ಶನಕ್ಕೆ ಹೆಚ್ಚಿನ ಪ್ರಾಶಸ್ಯವನ್ನ ನೀಡಿರುವುದನ್ನು ಕಾಣಬಹುದಾಗಿದೆ. ಈ ಜನಪದ ಮಹಾಕಾವ್ಯದ ಮೂಲ ಜನಪದ ಕತೆಯೇ ಆಗಿದೆ. ಮಹಾದೇಶ್ವರ, ನಂಬಿದ ಭಕ್ತರನ್ನು ಕಾಪಾಡುವುದನ್ನು ಕಾಣುತ್ತೇವೆ. ಸಂಕಮ್ಮನ ಗಂಡ ಇವಳ ಮೇಲೆ ಅನುಮಾನ ಪಟ್ಟು, ಭಾಷೆಯನ್ನು ಕೇಳಿದಾಗ ಕೊಡದಿದ್ದಾಗ ಅವಳನ್ನು ಕೂಡಿ ಹಾಕಿ ಕಷ್ಟ ಕೋಟಲೆಗಳನ್ನು ಕೊಟ್ಟಾಗ ನೆನದ ತಕ್ಷಣ, ಮಾದೇಶ್ವರ ಬಂದು ಮಾಡಿ ಭಕ್ತಳನ್ನ ಕಾಪಾಡುವುದು. ಅವಳಿಗೆ ಮಕ್ಕಳನ್ನದಯ

ಪಾಲಿಸುವುದು, ಅವಳ ಗಂಡನಿಗೆ ಬುದ್ಧಿ ಕಲಿಸುವ ಪವಾಡಗಳನ್ನ ಭಕ್ತರನ್ನ ಕಾಪಾಡಿದ್ದಾನೆ. ಹೀಗೆ ಇನ್ನು ಅನೇಕ ಪವಾಡಗಳನ್ನು ಕಾವ್ಯದ ಉದ್ದಕ್ಕೂ ಕಾಣಬಹುದು.

ಮಾದಪ್ಪ ಎಂಬ ಹೆಸರು ಅವನು ದಪ್ಪವಾಗಿ ಇದ್ದುದ್ದರಿಂದ ಅವನಿಗೆ ಮಾದಪ್ಪ ಎಂಬ ಹೆಸರು ಬಂದಿತು ಎಂಬ ಐತಿಹ್ಯ ಹಾಗೆಯೇ ಇವನು ಮಾದಿಗರವನು ಎಂಬುವುದರಿಂದ ಬಂದಿದೆ ಎಂಬ ಪ್ರತೀಕ ಇದೆ. ಅವನು ಬೆಟ್ಟದ ಚಾಮುಂಡಿಗೆ ವೈರಿ, ಸನ್ಯಾಸಿಯಾದವನು ಎಂದೂ ಹೆಂಗಸರು ಮಹದೇಶ್ವರ ಬೆಟ್ಟಕ್ಕೆ ಹೋಗುವುದಕ್ಕೆ ಸುರು ಮಾಡಿದ ಮೇಲೆ ಅವನು ನಾಗಮಲೆಗೆ ಹೋದ ಎಂಬ ಐತಿಹ್ಯವು ಇದೆ. ಒಟ್ಟಿನಲ್ಲಿ ಮಹಾದೇಶ್ವರ ಕಾವ್ಯ ಜನಪದ ಮಹಾಕಾವ್ಯಗಳಲ್ಲಿ ಒಂದು.

ಮಹದೇಶ್ವರ ದೀನದಲಿತರ ರಕ್ಷಣೆಯನ್ನು ಮಾಡುವುದಕ್ಕೆ ನಿರಂತರ ಶ್ರಮಿಸುವ ಪ್ರಸ್ತಾಪ ಕಾವ್ಯದ ಉದ್ದಕ್ಕೂ ಇದೆ. ಇವನು ದೀನ ದಲಿತರ ರಕ್ಷಣೆ ಮಾಡಿ ಇವರನ್ನು ತನ್ನ ಒಕ್ಕಲು ಮಾಡಿಕೊಂಡಿದ್ದಾನೆ. ಐತಿಹಾಸಿಕವಾಗಿ ಇದ್ದವರು. ಉತ್ತರ ಕರ್ನಾಟಕದಿಂದ ಬಸವಣ್ಣನವರ ಕಾಲದಲಿ ಕ್ರಾಂತಿ ನಂತರ ಇತ್ತ ಬಂದರೆಂಬ ಐತಿಹ್ಯ ಸಹ ಇದೆ.

“ಮಲೆ ಮಹದೇಶ್ವರ ಕಾವ್ಯದ ಮಾದಪ್ಪನದು ಸದಾ ಪಯಣದ ಬದುಕು, ಬಿಕ್ಷೆ ಬೇಡುವುದೇ ಅವನ ವೃತ್ತಿ. ಆದರೆ ಅವನಿಗೆ ಒಬ್ಬ ಸಾಮಾನ್ಯ ವ್ಯಕ್ತಿಗಿರಬಹುದಾದ ಆಸೆಗಳಿಗೆ. ತನ್ನ ಒಕ್ಕಲುಗಳನ್ನ ಹೆಚ್ಚಿಸಿಕೊಂಡು ಒಂದು ಕಡೆ ನೆಲೆ ನಿಲ್ಲಬೇಕೆಂಬ ತವಕ ಅವನದು. ಈ ಆಸೆಯಿಂದಲೇ ಹಲವು ಜನ ವರ್ಗಗಳ ಪ್ರಮುಖರನ್ನ ತನ್ನಡೇಗೆ ಸೆಳೆಯುವ ಹುನ್ನಾರ ಹೂಡುತ್ತಾನೆ. ಫಲಿಸದಿದ್ದಾಗ ಮಾಟಮಂತ್ರಗಳ ಕಡೆಗೆ ವಾಲುತ್ತಾನೆ. ಅಂತೂ ಹೇಗೊ ಗೆಲ್ಲ ಬೇಕು ಅವರನ್ನು ತನ್ನ ಪರಿಧಿಗೆ ಸೇರಿಸಿಕೊಂಡು ಅವರ ಜೀವನ ಹಸನು ಗೊಳಿಸಬೇಕು. ಎಂಬುದು ಅವನ ಉದ್ದೇಶ”[9]

ಮಂಟೇಸ್ವಾಮಿಯು ಸಹ ಮಹದೇಶ್ವರನ ರೀತಿಯಲ್ಲಿ ಅನೇಕ ಪವಾಡವನ್ನ ಮಾಡಿದ ಪವಾಡ ಪುರುಷ, ಇದರಲ್ಲಿ ಮಂಟೇಸ್ವಾಮಿ ಮತ್ತು ಆತನ ಶಿಷ್ಯರಾದ ಸಿದ್ದಪ್ಪಾಜಿ ಮತ್ತು ರಾಜಪ್ಪಾಜಿಯವರ ಲೀಲೆಗಳು ಇರುವುದನ್ನ ಕಾಣಬಹುದು. ಕೆಳ ವರ್ಗದಲ್ಲಿ ಹುಟ್ಟಿದವನೆಂದು ಹೇಳುವ ಮಂಟೇಸ್ವಾಮಿಯು ತನ್ನ ಹೆಚ್ಚಿನ ಸಾಮರ್ಥ್ಯ ಮತ್ತು ಉನ್ನತ ಗುಣಗಳಿಂದ ಎಲ್ಲ ಬಗೆಯ ಗ್ರಾಮೀಣ ಜನರ ಗೌರವಾಭಿಮಾನಗಳನ್ನ ಪಡೆದುಕೊಂಡ ದೊಡ್ಡ ವ್ಯಕ್ತಿ.

---

[9] ಹಿ.ಚಿ ಬೋರಲಿಂಗಯ್ಯ 'ಜುಂಜಪ್ಪನ ಮಹಾಕಾವ್ಯ' ಪ್ರಸಾವನೆ.

ಮಂಟೇಸ್ವಾಮಿಯ ಶಿಷ್ಯ ರಾಚಪ್ಪಾಜಿಯ ಕಪ್ಪಡಿಗೆ ಹೋಗುವದಾರಿಯಲ್ಲಿ ಮೈಸೂರು ಅರಸರಿಗೆ ಸಹಾಯ ಮಾಡಲು ಕಾಡುಗಹಳ್ಳಿಯ ನಾಯಕರನ್ನು ಕೊಂದ ಘಟನೆಯು ಸಹ ಮುಖ್ಯಾವಾಗಿದೆ. ಮಳವಳ್ಳಿಯ ಬಳಿಯ ಬೊಪ್ಪಗೌನಡಪುರ, ಮೂಲಗುರು ಮಂಟೇಲಿಂಗಯ್ಯನವರು ನೆಲಸಿರುವ ಪುಣ್ಯನೆಲೆ. ರಾಚಪ್ಪಾಜಿಯವರು ಮೈಸೂರಿನ ಮಾರ್ಗವಾಗಿ ಎಡ ತೊರೆಯ ಬಳಿಯ ಕಪ್ಪಡಿ ಕ್ಷೇತ್ರಕ್ಕೆ ಹೋಗಿ ನೆಲಸಿದರು.

"ಮಂಟೇಸ್ವಾಮಿ ಜಗತ್ತನ್ನೆ ಸೃಷ್ಟಿಸಬಲ್ಲ ಒಬ್ಬ ಪವಾಡಕಾರ ಆದರೆ ಸದಾ ನಡೆದಾಡುತ್ತಾ, ಭಂಗಿ ಸೇವಿಸುತ್ತಾತಿರುಗುವ ಈ ಭೈರಾಗಿ, ಕಟ್ಟುವ ಲಿಂಗದ ಬದಲಾಗಿ ಆತ್ಮಲಿಂಗದ ಶ್ರೇಷ್ಠತೆಯನ್ನ ಸಾರುವ ಒಬ್ಬ ಜ್ಯೋತಿ ಪುರುಷ ಎಂಥ ಕಟುಕರನ್ನೂ ಕರಗಿಸಬಲ್ಲ ಆತ್ನ ಬಲ ಪಡೆದವನು. ತನಗೆ ತಕ್ಕನಾದ ಶಿಶು ಮಗನನ್ನ ಪಡೆದ ನಂತರ ಪಾತಾಳ ಬಾವಿಯಲ್ಲಿ ಪ್ರಾಣನೀಗುವ ತವಕ ಅವನಿಗೆ".[10]

ಮೈಲಾರ ಲಿಂಗನನ್ನ ಕುರಿತ ಕಾವ್ಯ ಸ್ಥಳ ಪುರಾಣಗಳು, ಜನಪದ ಕತೆಗಳು ಹೇರಳವಾಗಿವೆ. ದೇವರ ಮಹಿಮೆ ಮತ್ತು ಪವಾಡಗಳು ಇಲ್ಲೆಲ್ಲಾ ಸ್ವಾರಸ್ಯಕರವಾಗಿ ನಿರೂಪಿತವಾಗಿದೆ. "ಮಣಿಮಲ್ಲಾಸುರನೆಂಬ ರಾಕ್ಷಸನು ಯಾರಿಂದಲೂ ತನಗೆ ಸಾವು ಬರದಂತೆ ಶಿವನನ್ನ ಬೇಡಲು ಹೋದಾಗ ಶಿವ ಕೋಪದಿಂದ ತನ್ನ ತಲೆಯನ್ನ ಕೊಡುತ್ತಾನೆ. ಆಗ ಹೊರ ಬಂದ ತುಪ್ಪದ ಮಾಳವ್ವ ಆ ರಾಕ್ಷಸನನ್ನ ಕೊಲ್ಲಲಾರದೆ ಹೋದಾಗ ಶಿವನು ಗೊರವರ ವೇಷದಲ್ಲಿ ಬಂದು, ಆತನನ್ನು ಕೊಂದು ಮಾಳವ್ವ ನನ್ನ ಮದುವೆಯಾದ ಬಗ್ಗೆ ಒಂದು ಕತೆಯಿದೆ"[11]. ಇದರ ಜತೆಗೆ ಇನ್ನೊಂದು ಕತೆ ಕೂಡ ಇದೆ. ಸಿರಿವಂತರ ಮಗಳಾದ ಮಾಳವ್ವ ತನ್ನ ಅಣ್ಣಂದಿರಿಗೆ ಬುತ್ತಿಯನ್ನು ಹೊತ್ತೊಕೊಂಡು ಹೋಗುತ್ತಿದ್ದಾಗ ಮೈಲಾರಲಿಂಗ ದಾರಿಯಲ್ಲಿ ಗೊರವರ ವೇಷದಲ್ಲಿ ಬಂದು ತಡೆಯುತ್ತಾನೆ. ರಾಕ್ಷಸನೆಂದು ತಿಳಿದು ಹೆದರಿದ ಮಾಳವ್ವ ಕೂಗಿದಾಗ ಆಕೆಯ ಅಣ್ಣಂದಿರು ಬರುತ್ತಾರೆ. ಅವರು ಛೂ ಬಿಟ್ಟ ನಾಯಿಗಳು ಗೊರವನನ್ನ ಮುದ್ದಾಡಲು ತೊಡಗುತ್ತವೆ. ದೊಣ್ಣೆ ಹೊಡೆತ ಗೊರವಯ್ಯನಿಗೆ ಬಿದ್ದರೆ ಬಾಸುಂಡೆಗಳು ಹೊಡೆದ ಅಣ್ಣಂದಿರಿಗೇ ಕಾಣಿಸಿಕೊಳ್ಳತ್ತವೆ. ಮಾಳವ್ವ ನನ್ನ ಮದುವೆಯಾಗಲು ಗೂರವ ಪ್ರಯತ್ನಿಸುತ್ತಾನೆ. ಅವಳ ಅಣ್ಣಂದಿರು ಒಪ್ಪದಿದ್ದಾಗ ಆಕೆಯನ್ನ ಕರಿಯ ನಾಯಿಯನ್ನಾಗಿ ಮಾಡಿ ಕರೆದುಕೊಂಡು

---

[10] ಹಿ.ಚಿ ಬೋರಲಿಂಗಯ್ಯ 'ಜುಂಜಪ್ಪನ ಮಹಾಕಾವ್ಯ' ಪ್ರಸಾವನೆ,

[11] ಡಾ॥ ಕಾಳೇಗೌಡ ನಾಗವಾರ 'ಜನಪದ ಸಾಹಿತ್ಯ' ಪುಟ ಸಂಖ್ಯೆ : 151

ಹೋದನೆಂದು ಕೂಡ ಕಥೆ ಬರುತ್ತದೆ. ಆ ಸಂದರ್ಭದ ಗೊರವನ ವೇಷವನ್ನು ಮಾಳವ್ವನ ಅಣ್ಣಂದಿರಿಗೆ ಮೈಲಾರಲಿಂಗ ಕೊಟ್ಟವೆಂದು ಇಲ್ಲಿ ಸೂಚಿತವಾಗಿದೆ.

"ಒಬ್ಬ ಕುರಿಕಾಯುವ ಅಮಾಯಕ ತನ್ನ ಆಸೆ ನೇರವೇರಿಸಿ ಕೊಳ್ಳಲು ಅತ್ಯಂತ ಸಹಜವಾಗಿ ಒಂದು ಹೆಣ್ಣಿಗೆ ಗಂಟು ಬಿದ್ದಿದ್ದಾನೆ. ಉಗಿದರೆ ಉಗಿಸಿಕೊಳ್ಳುತ್ತಾನೆ. ಒದೆದರೆ ಒದೆಸಿಕೊಳ್ಳತ್ತಾನೆ. ಆದರೂ ಅವಳು ಸಿಗುವವರೆಗೂ ಬಿಡುವವನಲ್ಲ"[12]

ಜುಂಜಪ್ಪನ ಕಾವ್ಯವನ್ನ ಹಲವು ರಾತ್ರಿಗಳ ಕಾಲ ಆತನ ಭಕ್ತರು ಹಾಡುತ್ತಾರೆ. ಮೂರು ತಲೆಮಾರುಗಳ ಕಥೆ ಇದು ಅನೇಕ ದುರಂತಗಳ ಮೂಲಕ ಹಾದು ಬರುವ ಕಥೆ ಜುಂಜಪ್ಪನ ಕಾವ್ಯ. ಪೂಜಾರಿ ಕೆಂಡಪ್ಪ ಕೆಂಗುರಿ ಮಲ್ಲೇಗೌಡ, ಕೆಂಪನ ಮಲ್ಲೇಗೌಡ ಹೀಗೆ ಮೂರು ತಲೆಮಾರು ಕಳೆದು ನಾಲ್ಕನೆಯವನಾಗಿ ಜುಂಜಪ್ಪ ಕಾಣಿಸಿಕೊಳ್ಳತ್ತೇನೆ. ಕೆಂಗುಲಿ ಮಲ್ಲೇಗೌಡನಿಗೆ ಮದುವೆ ಮಾಡುತ್ತಾರೆ. ಗಂಡ ಕಾಡಿನಲ್ಲಿದ್ದಾಗ ಊರಿನಲ್ಲಿದ್ದ ಹೆಂಡತಿ ಸಿನ್ನಮ್ಮ ಗರ್ಭವತಿಯಾದಳು ಒಂಭತ್ತು ತಿಂಗಳು ತುಂಬುತ್ತಿದ್ದಂತೆಯೇ ಈಕೆಯು ಇನ್ನೂ ಹೆಚ್ಚಿನ ಭಯ ಆತಂಕದಲ್ಲಿ ಮುಳುಗುತ್ತಾಳೆ. ತಾಯಿಯ ಗರ್ಭದಲ್ಲಿದ್ದ ಜುಂಜಪ್ಪ ತಾಯಿಗೆ ದೈರ್ಯ ಹೇಳಿತ್ತಾನೆ. ಜುಂಜಪ್ಪ ಮಾರಣ್ಣ ಮೈಲಾರಣ್ಣ ಮತ್ತು ತಂಗಿ ಮಾರಕ್ಕ ಹೀಗೆ ನಾಲ್ಕು ಜನ ಮಕ್ಕಳು ಹುಟ್ಟುತ್ತಾರೆ.

ಮಾರಕ್ಕ ಹುಟ್ಟಿದ ಕಾರಣದಿಂದ ಕೆಂಪನ ಮಲ್ಲೇಗೌಡನೂ ಮರಣ ಹೊಂದುತ್ತಾನೆ. ಚಿಕ್ಕ ತಮ್ಮಂದಿರ ಜತೆಗೆ ಹೆಚ್ಚಿನ ಜವಾಬ್ದಾರಿಗಳನ್ನ ಜುಂಜಪ್ಪ ಹೊತ್ತುಕೊಳ್ಳುತ್ತಾನೆ. ಜುಂಜಪ್ಪ ಸಾವಿರಾರು ದನಗಳ ಸರದಾರನಾಗುತ್ತಾನೆ.

ಜುಂಜಪ್ಪನ ಏಳಿಗೆಯನ್ನ ಅವನ ಸೋದರ ಮಾವಂದಿರಾದ ಕಂಬೇರಗೊಲ್ಲರು ಸಹಿಸಿಕೊಳ್ಳದೆ ನಾನಾ ರೀತಿಯ ಕಷ್ಟಗಳನ್ನ ತಂದೊಡ್ಡುತ್ತಾರೆ. ಕನಸು ಬಿದ್ದು ಬೆಚ್ಚಿ ಮಗನನ್ನ ಕರೆದು ತನ್ನ ತವರು ಮನೆಗೆ ಹೋಗಬೇಡವೆಂದು ಎಚ್ಚರಿಸುತ್ತಾಳೆ. ನಿನ್ನನ್ನು ಅವರು ಮದ್ದಿಕ್ಕಿ ಕೊಲ್ಲುತ್ತಾರೆ, ಎಂದರೂ ಜುಂಜಪ್ಪ ಹೆದರದೆ ಮುಂದುವರಿಯುತ್ತಾನೆ.

ಜುಂಜಪ್ಪ ಇದ್ಯಾವುದಕ್ಕೂ ಹೆದರಲಿಲ್ಲ ಎಲ್ಲವನ್ನೂ ಸವಾಲಿನಂತೆ ಸ್ವೀಕರಿಸುತ್ತಾನೆ. ಮಾವಂದಿರು ಮಾಡಿರುವ ಅಡಿಗೆಯನ್ನೆಲ್ಲ ತನ್ನೊಬ್ಬನಿಗೆ ಮಾತ್ರವೇ ಬಡಿಸುವಂತೆ

---

[12] ಓ.ಚಿ ಬೋರಲಿಂಗಯ್ಯ 'ಜುಂಜಪ್ಪನ ಮಹಾಕಾವ್ಯ' ಪ್ರಸಾವನೆ,

ಕೇಳಿಕೊಳ್ಳುತ್ತಾನೆ. ವಿಷದ ಕಜ್ಜಾಯವನ್ನ ಬಡಿಸುತ್ತಾರೆ. ಅವನ್ನ ತಿಂದು ಉರಿಯನ್ನ ತಾಳೆಲಾರದೆ ಏಳು ದಿನಗಳ ನಂತರ ಜುಂಜಪ್ಪ ಕಣ್ಣುಜ್ಜಿಕೊಂಡು ಮೇಲೇಲುತ್ತಾನೆ. ಅಷ್ಟರಲ್ಲಿ ಗಾಬರಿಯಾದ ಮಾದಣ್ಣ ಮೈಲಣ್ಣರು ಕೂಡಾ ಬಂದು ಸೇರಿಕೊಳ್ಳುತ್ತಾರೆ. ಜುಂಜಪ್ಪ ಮಾವಂದಿರ ತಲೆಗಳನ್ನ ಕತ್ತರಿಸಿ ಹಾಕುತ್ತಾನೆ. ತಂಗಿ ಮಾರಕ್ಕ ಮಾತ್ರ ಉಳಿಯುತ್ತಾಳೆ. ತಾಯಿಯನ್ನ ಕಂಡ ಜುಂಜಪ್ಪ ಆಕೆಯ ತವರಿನವರು ತಾವು ಮಾಡಿದ ಅನ್ಯಾನಕ್ಕಾಗಿ ಹಾಳಾಗಿರುವ ಸಂಗತಿಯನ್ನ ವಿವರಿಸುತ್ತಾನೆ. ಆದರೆ ಚಲುವರಾಜುರವರ ಜುಂಜಪ್ಪದಲ್ಲಿ ಕೈಲಾಸಕ್ಕೆ ತಮ್ಮಂದಿರನ್ನು ಕರೆದುಕೊಂಡ ಹೋದನು ಎಂಬುದಿದೆ. ಮಾವಂದಿರನ್ನು ಸುಟ್ಟುಹಾಕಿದ ಎಂಬುದು ಸಹ ಇದೆ.

ಹೀಗೆ ಜುಂಜಪ್ಪನ ಕಥೆಯು ಅನೇಕ ಸಾಹಸ ಪೂರ್ಣ ಘಟನೆಗಳ ಮೂಲಕ ಹಾದು ಬೆಳೆಯುತ್ತದೆ. ಗೊಲ್ಲರ ಪಾಲಿಗೆ ತುಂಬ ಪ್ರಿಯವಾದ ಈ ಕಥೆಯ ವೀರ ಜುಂಜಪ್ಪ ಇಪ್ಪತ್ತನಾಲ್ಕು ವರ್ಷಗಳ ನಂತರ ಕಾಯ ಕಳ್ಳೇರಹಳ್ಳಿಯ ದೊರೆತನಕ್ಕೆ ಹಿಂದಿರುಗುತ್ತಾನೆ. ಶಿಷ್ಯ ಕಾವ್ಯ ಮತ್ತು ಪುರಾಣಗಳ ಸೋಂಕನ್ನ ಕಾಣದ ಪ್ರತ್ಯೇಕ ವರ್ಗವಾಗಿ ಬಂದ ಇಲ್ಲಿನ ಹಾಡುಗಾರರು ತಾವು ಕಂಡುಂಡ ಬದುಕಿನ ಅನುಭವಗಳನ್ನ ತಮ್ಮ ಕಾವ್ಯದಲ್ಲಿ ಸಮರ್ಥವಾಗಿ ಸೇರಿಸಿದ್ದಾರೆ. ತಮ್ಮ ಪ್ರೀತಿಯ ವೀರ ನಾದ ಜುಂಜಪ್ಪ ನನ್ನ ಕುರಿತು ಅವರು ಅನೇಕ ಬಗೆಯಲ್ಲಿ ಆತನ ಗುಣಗಳನ್ನ ವರ್ಣಿಸಿ ತೃಪ್ತಿ ಪಡುತ್ತಾರೆ.

ಜನಪದ ಮಹಾಕಾವ್ಯಗಳಲ್ಲಿ ಲಿಖಿತ ಮಹಾಕಾವ್ಯಗಳ ಹಾಗೆ ಅಷ್ಟದಶ ವರ್ಣನೆಗಳ ಕೊಡದಿದ್ದರು, ಇದ್ದುದ್ದನ್ನ ಇದ್ದ ಹಾಗೆ ಹೇಳಿದ್ದಾರೆ. ಲಿಖಿತ ಮಹಾಕಾವ್ಯದಲ್ಲಿ ಕಾವ್ಯದ ಸತ್ಯಕ್ಕೆ ಹೆಚ್ಚು ಮಹತ್ವ ಕೊಟ್ಟಿದ್ದರೆ. ಜನಪದ ಮಹಾಕಾವ್ಯದಲ್ಲಿ ಜೀವನ ಸತ್ಯಕ್ಕೆ ಹೆಚ್ಚು ಮಹತ್ವ ಕೊಟ್ಟಿರುವುದನ್ನು ಕಾಣಬಹುದು. ಜನ ಸಾಮಾನ್ಯರಿಗೆ ತಮ್ಮೊಳಗಿನ ಕಾವ್ಯವನ್ನ ಓದಿದ ಅನುಭವವನ್ನು ತಂದು ಕೊಡುತ್ತವೆ.

# ಅಧ್ಯಾಯ – 3

## ಜನಪದ ವೃತ್ತಿಗಾಯಕರು

ಮೌಖಿಕವಾಗಿ ತಲೆಮಾರಿನಿಂದ ತಲೆಮಾರಿಗೆ ಸಾಗುವ ಸಾಹಿತ್ಯವೇ ಜನಪದ ಸಾಹಿತ್ಯ. ಅನಕ್ಷರಸ್ಥರ ಸಮಾಜದಲ್ಲಿ ಈ ಸಾಹಿತ್ಯ ಪರಂಪರಾನುಗತವಾಗಿ ಉಳಿದು ಬಂದಿತ್ತು. ಇದು ಮೂಲದಲ್ಲಿ ಏಕಕರ್ತೃವಾದರೂ ಅದು ಕ್ರಮೇಣ ಬಹುಕರ್ತೃವೆಡೆಗೆ ಸಾಗುತ್ತದೆ. ಇದನ್ನು ಸಾಹಿತ್ಯ ರೂಪದಲ್ಲಿ ಹಾಡುವವರೆ ಜನಪದ ಗಾಯಕರು

ವೃತ್ತಗಾಯಕರು ಕನ್ನಡ ಜನಪದ ಸಾಹಿತ್ಯಕ್ಕೆ ಹೆಚ್ಚಿನ ವಿವಿಧತೆ ಭವ್ಯತೆಯನ್ನು ತಂದುಕೊಟ್ಟರು, ನಮ್ಮ ವೃತ್ತಗಾಯಕರು. ಇವರು ಭಿಕ್ಷೆ ಬೇಡುವುದು ಒಂದು ಕಡೆಯಾದರೆ, ತಮ್ಮ ಇಷ್ಟ ದೇವರ ಲೀಲೆಗಳನ್ನು ಹಾಡುತ್ತಾರೆ. ಅವರು ಬಂದ ಸಾಂಪ್ರದಾಯಕ ಹಿನ್ನೆಲೆ ತುಂಬಾ ಗಮನಾರ್ಹವಾಗಿದೆ. ತಮ್ಮ ಇಷ್ಟ ದೈವವನ್ನು ಅನೇಕ ಉತ್ತಮ, ವಿಸ್ತಾರವು ಆದ ಜನಪದ ಕಾವ್ಯಗಳನ್ನ ವೃತ್ತಿಗಾಯಕರು ತಮ್ಮ ಶ್ರೀಮಂತ ಕಂಠದಿಂದ ಹಾಡುವುದೆ ಇವರ ಮುಖ್ಯ ವೃತ್ತಿ. ಇವರು ಧಾರ್ಮಿಕ ಲೌಖಿಕ ಕಾವ್ಯಗಳನ್ನ ಕೆಲವರು ಹೊಟ್ಟೆಯ ಪಾಡಿಗಾಗಿ ಹಳ್ಳಿಗಳ ಮೇಲೆ ದವಸದಾನ್ಯ ಸಂಗ್ರಹಿಸುತ್ತಾ ಸದಾ ಸಂಚರಿಸುತ್ತಾರೆ. ಕಥೆಯನ್ನ ಸಾಹಿತ್ಯದ ರೂಪದಲ್ಲಿ ಹಾಡಿ ಜನತೆಯನ್ನ ರಂಜಿಸುವ, ಭಕ್ತಿ ಭಾವವನ್ನು ಮುಡಿಸುವ ಕೆಲಸವನ್ನ ಮಾಡುತ್ತಾರೆ. ಇವರುಗಳ ಬಗ್ಗೆ ಜನತೆಯಲ್ಲಿ ಗೌರವ ಉಂಟಾಗುತ್ತದೆ. ಹಳ್ಳಿಗಳಲ್ಲಿ ಸುಗ್ಗಿಯ ಸಮಯದಲ್ಲಿ ಬಂದ ವೃತ್ತಿಗಾಯಕರಿಂದ ರಾತ್ರಿಯ ವೇಳೆಯಲ್ಲಿ ಹಾಡನ್ನು ಹೇಳಿಸಿ ಬೆಳಿಗ್ಗೆ ಅವರಿಗೆ ದವಸದಾನ್ಯ ಕೊಟ್ಟು ಕಳುಹಿಸುವ ಪರಿಪಾಠವು ಇದೆ. ಇವರು ತಮ್ಮದೇ ಆದ ಧಾರ್ಮಿಕ ಉಡುಪುಗಳನ್ನು ತೊಟ್ಟುಕೊಂಡು ಆಕರ್ಷಿಕ ವಾದ್ಯ ವಿಶೇಷಗಳನ್ನ ಬಳಸಿ ಹಾಡುತ್ತಾರೆ.

ಕರ್ನಾಟಕದ ದಕ್ಷಿಣ ತುದಿಯಲ್ಲಿ ಹೆಚ್ಚಾಗಿ ವೃತ್ತಿಗಾಯಕರು ಕಂಡು ಬರುತ್ತಾರೆ. ಇವರುಗಳನ್ನು ಡಾ॥ ಜಿ.ಶಂ. ಪರಮಶಿವಯ್ಯ ಮತ್ತು ಹೆಚ್. ಎಲ್. ನಾಗೇಗೌಡ ಸಂಶೋಧನೆ ಮಾಡಿ ಕಂಡು ಹಿಡಿದರು ಜಿ.ಶಂ ಪರಮಶಿವಯ್ಯ ಪ್ರಮುಖ ಸಂಪ್ರದಾಯಗಳಾದ ಕಂಸಾಳೆ, ನೀಲಗಾರ, ತಂಬೂರಿ, ಚೌಡಿಕೆ, ಕರಪಲ್ಲ, ಕಾಡುಗೊಲ್ಲರ ಸಂಪ್ರದಾಯದ ವೃತ್ತಿಗಾಯಕರನ್ನು ಸಂಶೋಧನೆ ಮಾಡಿದರು. ಹೆಳವರು ಮತ್ತು ಗೊರವ ಸಂಪ್ರದಾಯದಗಳ ಗಾಯಕರನ್ನು ನಾಗೇಗೌಡರು ಹುಡುಕಿದರು. ಇವರ ಮಾರ್ಗದರ್ಶನದಲ್ಲಿ ಕರ್ನಾಟಕದ ಇನ್ನಿತರ ಸಂಪ್ರದಾಯದವರನ್ನು ಕೆಲವಾರು ಜನ ಸಂಶೋಧನೆ ಮಾಡಿದ್ದಾರೆ. ಇದರ ಫಲವಾಗಿ

ಕರ್ನಾಟಕದ ನಾನಾ ಮೂಲೆಯಲ್ಲಿ ಹುದುಗಿದ್ದ ನಾನಾ ಸಂಪ್ರದಾಯಗಳಗಾಯಕರು ಬೆಳಕಿಗೆ ಬಂದರು. ಇಲ್ಲಿಯವರೆಗೆ ಸಂಶೋಧನೆಗೊಂಡ ಗಾಯಕರೆಂದರೆ ಕಂಸಾಳೆಯವರು, ನೀಲಗಾರರು, ಚಾಡಿಕೆಯವರು ಗೊಂದಲಿಗರು ಗೊರವರು, ಗಣೆಯವರು, ಕರಪಾಲದವರು. ದೊಂಬಿದಾಸರು, ಹೆಳವರು, ತೆಲಗು ಜಂಗವರು, ಜೋಗಿಗಳು, ತಂಬೂರಿಯವರು, ಭೂತೇರು ಮತ್ತು ವಚನಕಾರಿಯರು,

ವೃತ್ತಿಗಾಯಕರನ್ನು ಧಾರ್ಮಿಕ ವೃತ್ತಿಗಾಯಕರು ಹಾಗೂ ಮೌಖಿಕ ವೃತ್ತಿಗಾಯಕರು ಎಂದು ಎರಡು ಭಾಗಗಳಾಗಿ ವಿಂಗಡಿಸಬಹುದು. ಧಾರ್ಮಿಕ ವೃತ್ತಿಗಾಯಕರು ಅವರ ಆರಾಧ್ಯದೈವದ ಬಗ್ಗೆ ಹಾಡುವಂತಹ ವಿಶಿಷ್ಟ ವರ್ಗದ ಗಾಯಕರು. ಇದರಲ್ಲಿ ಜುಂಜಪ್ಪನ ಕಾವ್ಯವನ್ನ ಹಾಡುವ ಗಣೆಯವರು ಅಥವಾ ಕಾಡುಗೊಲ್ಲರು ಸಹ ಪ್ರಮುಖರು

**1. ಕಂಸಾಳೆ ದೇವರ ಗುಡ್ಡರು**

ಕನ್ನಡ ಜನಪದ ಮಹಾಕಾವ್ಯಗಳಲ್ಲಿ, ಮಲೆಯ ಮಾದೇಶ್ವರ ಕಾವ್ಯ ಒಂದು. ಇವರನ್ನ ಕಂಸಾಳೆ ದೇವರ ಗುಡ್ಡರು ಎನ್ನುತ್ತಾರೆ. ಇವರು ಕರ್ನಾಟಕದ ಬೆಂಗಳೂರು, ಮಂಡ್ಯ, ಮೈಸೂರು ಜಿಲ್ಲೆಯ ದಕ್ಷಿಣ ಭಾಗದಲ್ಲಿ, ತಮಿಳು ನಾಡಿನ ಸೇಲಂ, ಕೊಯಂಮತ್ತೂರು ಜಿಲ್ಲೆಗಳಲ್ಲಿ ಇದ್ದಾರೆ. 'ಕಂಸಾಳೆ' ಯವರು ಎಂದು ಕರೆಯುವುದುಕ್ಕೆ ಕಾರಣ ಇವರು ಬಳಸುವ ಕಂಚಿನ ತಾಳಾಕ್ಕೆ ಕಂಸಾಳೆ ಎಂಬ ಹೆಸರಿದ್ದು, ಬಟ್ಟಲಿನ ಆಕಾರದಿಂದ ಕೂಡಿದೆ. ಇದು ಇವರಿಗೆ ವಿಶಿಷ್ಟವಾದ ಸಾಧನ ಮತ್ತು ಪೂಜ್ಯ ವಸ್ತು. ಈ ಕಂಸಾಳೆಯನ್ನು ಎಲ್ಲರು ಹಿಡಿಯುವುದಿಲ್ಲ. ಇದನ್ನು 'ದೇವರಗುಡ್ಡ' ರಾದವರು ಮಾತ್ರ ಹಿಡಿಯತ್ತಾರಂತೆ. ಮಲೆಯ ಮಹದೇಶ್ವರ ಕಂಸಾಳೆಯನ್ನು ಹಿಡಿದು ಕ್ವಾರಣ್ಯಕ್ಕೆ ಹೋಗುತ್ತಿದ್ದನಂತೆ. ಈ ದೇವರ ಗುಡ್ಡರು ಊಟವನ್ನ ಮಣ್ಣಿನ ಬಟ್ಟಲಿನಲ್ಲಿ ಮಾಡಬೇಕು. ಸಾಮಾನ್ಯವಾಗಿ ಇವರು ಚಪ್ಪಲಿಗಳನ್ನ ತೊಡುವಹಾಗಿಲ್ಲ.

ಇವರು ತಲೆಯ ಮೇಲೆ ಗಂಟು, ಹೆಗಲಲ್ಲಿ ಹಸುಬೆ, ಕಂಕುಳಲ್ಲಿ ಕೋಲು, ಹಣೆಯಲ್ಲಿ ವಿಭೂತಿ, ಕೊರಳದಲ್ಲಿ ರುದ್ರಾಕ್ಷಿ, ಕೈಯಲ್ಲಿ ಕಂಸಾಳೆ ಹಿಡಿದು ಮಹದೇಶ್ವರನ ಮಹಿಮೆಯನ್ನ ಹಾಡುತ್ತಾ ಬರುತ್ತಿರುತ್ತಾರೆ. ಹತ್ತಾರು ರಾತ್ರಿಗಳವರೆಗೆ ದೀರ್ಘವಾಗಿ ಹಾಡಬಲ್ಲರು, ಮತ್ತೊಂದು ವಿಶೇಷವೆಂದರೆ ಮುಮ್ಮೇಳದವರು ಕಂಸಾಳೆಯನ್ನು ಹಿಡಿದು ಹಾಡಿದರೆ ಹಿಮ್ಮೇಳದವರು ದಮ್ಮಡಿ, ಏಕತಾರಿಯ ಹಿಡಿದು ಜೊತೆಗೆ ಹಾಡುತ್ತಾರೆ.

ಇವರು ಜುಣು ಜುಣು ಗುಡುವ ಕಂಸಾಳೆಯೊಂದಿಗೆ ನಮ್ಮ ಹಳಗನ್ನಡದ ಚಂಪೂ ನೆನಪಿಗೆ ತರುವಂತೆ ಆಡು ನುಡಿಯಲ್ಲಿ ಮಾದೇಶ್ವರ ಲೀಲೆಗಳನ್ನ ಪ್ರಸಾರ ಮಾಡುತ್ತಾ ಸಾಗುತ್ತಾರೆ.

"ಕೂಗೊ ಕೂಗೊ ಮಾದೇವನ

ಕೂಗಯ್ಯ ದುಂಡು ಮಾದೇವನ" [13]

ಹೀಗೆ ಮಾದಿಗರ ಮನೆಯಲ್ಲಿ ಹುಟ್ಟಿ ಬೆಳೆದು ಮುಂದೆ ಅವನು ಲೋಕಕ್ಕೆಲ್ಲಾ ಮಹಿಮೆ ತೋರಿದ ವ್ಯಕ್ತಿ. ಈತ ಕೆಳಕುಲದಲ್ಲಿ ಹುಟ್ಟಿದರು ಮಹಿಮಾವಂತನಾಗಿ ಬೆಳೆದು ಅಹಂಕಾರಿಗಳ ದರ್ಪ ದೌರ್ಜನ್ಯಗಳನ್ನ ಮುರಿದ ದೇವರು ಎಂದು ಹಾಡುತ್ತಾರೆ. ಇವರು 12ನೇ ಶತಮಾನದಲ್ಲಿ ಇದ್ದ ಶರಣರಿಗೆ ಈತನ ಪರಿಚಯವಿತ್ತು ಎಂದು ಐತಿಹ್ಯ ಈತನ ಕಥೆಯಲ್ಲಿ ಕಂಡು ಬರುತ್ತದೆ.

ಹೀಗೆ "ಕಂಸಾಳೆಯವರ ಮೂಲ ಪುರುಷ ಮಹದೇಶ್ವರ, ಹೀಗಾಗಿ ಕಂಸಾಳೆಯವರಿಗೆ ಮನದೇವರು, ಮನೆದೇವರು, ಕುಲದೇವರು ಎಲ್ಲಾವೂ ಮಾದೇಶ್ವರನೇ. ತಾತ ಉಳಿಸಿದ್ದ ತಂದೆಗೆ; ತಂದೆ ಉಳಿಸಿದ್ದು ಮಗನಿಗೆ; ಮಗ ಉಳಿಸಿದ್ದು ಮೊಮ್ಮಗನಿಗೆ ಎನ್ನುವ ರೂಡಿಯಂತೆ ಈ ಕಂಸಾಳೆಯವರ ಪರಂಪರೆ ಉಳಿದು ಬಂದಿದೆ."[14]

ದೇವರಿಗೆ ಗುಡ್ಡರನ್ನು ಬಿಡುವುದು ಸಹ ಒಂದು ವಿಶಿಷ್ಟ ಸಂಪ್ರದಾಯ ಮಹದೇಶ್ವರನ ಸೇವೆಗೆ ತಮ್ಮನ್ನು ಸಮರ್ಪಿಸಿಕೊಳ್ಳುವಿಕೆಯು ಮಹದೇಶ್ವರ ಬೆಟ್ಟದ ಸಾಲೂರು ಮಠದಲ್ಲಿಯೂ ನಡೆಯುತ್ತದೆ. ತಲೆಬೋಳಿಸಿಕೊಂಡು ಸ್ನಾನ ಮಾಡಿ, ಹೊಸ ಬಟ್ಟೆ ತೊಟ್ಟು, ವಿಭೂತಿ ಧರಿಸಿ ದೀಕ್ಷೆ ಪಡೆಯುತ್ತಾರೆ. ಹೀಗೆ ದೀಕ್ಷೆ ಪಡೆಯುವವರು ದೇವರ ಗುಡ್ಡರಾಗುತ್ತಾರೆ. ಜಾತ್ರೆಯ ಸಂದರ್ಭದಲ್ಲಿ ಮತ್ತು ಹಬ್ಬ ಹರಿದಿನಗಳಲ್ಲಿ ಮಹದೇಶ್ವರನ ಮಹಿಮೆಯನ್ನು ಕೊಂಡಾಡುತ್ತಾ ಭಿಕ್ಷೆ ಬೇಡುವ ಕಾಯಕವನ್ನು ಮುಂದುರಿಸಿಕೊಂಡು ಹೋಗುವ ಮೂಲಕ ದೇವರ ಸೇವೆ ಮಾಡುತ್ತಾರೆ.

**2. ನೀಲಗಾರರು**

ದಕ್ಷಿಣ ಕರ್ನಾಟಕದ ಮೈಸೂರು, ಮಂಡ್ಯ, ಬೆಂಗಳೂರು ಜಿಲ್ಲೆಗಳಲ್ಲಿ ನೀಲಗಾರ ವೃತ್ತಿಗಾಯಕರನ್ನು ಕಾಣಬಹುದು. ಇವರು ಧರೆಗೆ ದೊಡ್ಡವರಾದ ಮಂಟೇಸ್ವಾಮಿ ಮತ್ತು ಆತನ ಶಿಷ್ಯರಾದ ರಾಜಪ್ಪಾಜಿ ಮತ್ತು ಸಿದ್ದಪ್ಪಾಜಿಯವರ ಮಹಿಮೆಯನ್ನು ಹಾಡುತ್ತಾ ಸಾಗುವ ಇವರನ್ನು

---

13. ಡಾ॥ ಕಾಳೇಗೌಡ ನಾಗವಾರ, 'ಜನಪದ ಸಾಹಿತ್ಯ' ಪುಟ ಸಂಖ್ಯೆ : 125

14 ಡಾ॥ ಪಿ.ಕೆ. ರಾಜಶೇಖರ್ 'ಜನಪದ ಸಂಭ್ರಮ' ಪುಟ ಸಂಖ್ಯೆ : 209

ನೀಲಗಾರರು ಎಂದು ಕರೆಯುತ್ತಾರೆ. ನೀಲಗಾರ ಎಂಬ ಪದ ಲೀಲೆಗಾರದ ಗ್ರಾಮ್ಯರೂಪ. ಭಗವಂತ ತನ್ನ ಲೀಲಾ ವಿಲಾಸವನ್ನು ಜಗತ್ತಿನಲ್ಲಿ ಸೃಷ್ಠಿಮಾಡಿ ಅದರ ವೈಭವವನ್ನು ನೋಡಲು ತಾನೇ ಭೂಮಿಗೆ ನೀಲಗಾರ ವೇಷದಲ್ಲಿ ಭೂಮಿಗೆ ಬಂದನಂತೆ. ಆದ್ದರಿಂದ ಮಂಟೇಸ್ವಾಮಿ ಅಥವಾ ಸಿದ್ದಪ್ಪಾಜೀಯೇ ಮೊಟ್ಟ ಮೊದಲ ನೀಲಗಾರರು ಇರಬೇಕು. ಇವರು ಭೂಮಿ ಹುಟ್ಟುವ ಮೊದಲೆ ಹುಟ್ಟಿದರಂತೆ ಆದ್ದರಿಂದ ಇವರನ್ನು ಧರೆಗೆ ದೊಡ್ಡವರು ಎಂದು ಕರೆಯುತ್ತಾರೆ. ನೀಲಗಾರರನ್ನು ಮಂಟೇಸ್ವಾಮಿ, ಮಂಟೇದೇವರು, ಮಂಟ್ಟಯ್ಯ ಎಂದು ಸಹ ಕರೆಯುತ್ತಾರೆ. 'ಮಹಾಂತಸ್ವಾಮಿ' ಎಂಬುದು ಮಂಟೇಸ್ವಾಮಿ ಪದದ ಜನಪದ ಶಬ್ಧರೂಪ.

ನೀಲಗಾರರು ಹಣೆ, ಕಣ್‌ರೆಪ್ಪ, ಕಿವಿ. ಕುತ್ತಿಗೆ, ತೋಳುಗಳ ಮೇಲೆ ವಿಭೂತಿಯನ್ನು ಧರಿಸಿರುತ್ತಾರೆ. ಇವರು ತಲೆಗೆ ಕೆಂಪು ವಸ್ತ್ರದ ಪೇಟ, ಬಿಳಿ ಕಚ್ಚೆ ಪಂಚೆ ಮೇಲೆ ಕಪ್ಪು ಕೋಟು, ಬಗಲಿಗೆ ಕಾವಿಬಣ್ಣದ ಜೋಳಿಗೆ ಇದು ನಾಲ್ಕು ಮೂಲೆಯಿಂದ ಕೂಡಿರುತ್ತದೆ. ಕತ್ತಿನ ತುಂಬ ರುದ್ರಾಕ್ಷಿ ಹಾರವನ್ನು ಹಾಕಿರುತ್ತಾರೆ. ಹಿಂದೆ ನೀಲಗಾರರ ವೇಷ ಇಂದಿನವರಷ್ಟು ಸುಲಭವಾಗಿರಲಿಲ್ಲ. ಅವರು ನೀಲಗಾರರಿಗೆ ವಿಶಿಷ್ಠವೆನಿಸಿದ ಕಾವಿ, ಕಮಂಡಲು, ರುದ್ರಾಕ್ಷಿ, ನವಿಲುದೊಂದೆ, ಮುಳ್ಳು ಹಾವುಗೆ, ನಿಲಂಗಿ, ಕೆಂಪುಪೇಟ, ಜೋಳಿಗೆ ಅವರ ಅಲಂಕಾರದ ವಸ್ತುಗಳಾಗಿದ್ದವು. ಕಾಲ ಬದಲಾವಣೆಯದಂತೆ ಈ ಸಂಪ್ರದಾಯದಲ್ಲಿ ಸಡಿಲಿಕೆ ಉಂಟಾಯಿತು.

ನೀಲಗಾರರು ಹಾಡುವಾಗ ತಂಬೂರಿಯನ್ನ ವಾದ್ಯವಾಗಿ ಬಳಸುತ್ತಾರೆ. ಇದು ಶಾಸ್ತ್ರೀಯಾ ಸಂಗೀತದಲ್ಲಿ ಬಳಸುವುದಕ್ಕಿಂತ ಭಿನ್ನವಾಗಿದೆ. ಎರಡೂವರೆ ಅಡಿ ಉದ್ದವಿರುವ ಈ ತಂಬೂರಿಯಲ್ಲಿ ನಾಲ್ಕು ತಂತಿಗಳಿವೆ. ಇದರ ಮೇಲೆ ದೇವತೆಗಳ ಚಿತ್ರವಿರುವ ನಾಣ್ಯಗಳನ್ನ ಅಂಟಿಸಿರುತ್ತಾರೆ. ಇದರ ತಲೆ ನಾಗರ ಹಾವಿನ ಹೆಡೆಯ ರೀತಿಯಲ್ಲಿ ಇದೆ. ಇದಕ್ಕೆ ಹಲವಾರು ಲೋಹದ ತಗಡನ್ನು ಹಾಕಿರುತ್ತಾರೆ. ತಂಬೂರಿಯನ್ನು ನುಡಿಸುವುದಕ್ಕೆ ಕೈಬೆರಳಿಗೆ 'ಲಕ್ಕು' ಎನ್ನುವ ಸಾಧನ ಬಳಸುತ್ತಾರೆ.

"ಸಿದ್ದ ಸಿದ್ದರಿಗೆಲ್ಲ ಅತಿ ಮುದ್ದು ಘನ ನೀಲಿ

ಸಿದ್ದಯ್ಯ ಸ್ವಾಮಿ ಬನ್ನಿ"[15]

ಎಂದು ಹಾಡುತ್ತಾ ಭಿಕ್ಷೆಯನ್ನು ಬೇಡಿಕೊಂಡು ಊರೂರನ್ನು ಸುತ್ತುತ್ತಾ ದೇವ ಮಹಿಮೆಯನ್ನು ಬಿತ್ತರಿಸುತ್ತಾರೆ.

---

[15] ಡಾ॥ ಕಾಳೇಗೌಡ ನಾಗವಾರ 'ಜನಪದ ಸಾಹಿತ್ಯ' ಪುಟ ಸಂಖ್ಯೆ : 132

## 3. ಚೌಡಿಕೆಯವರು

ಜನಪದ ವೃತ್ತಿಗಾಯಕರಲ್ಲಿ ಎಲ್ಲಮ್ಮನ ಸಂಪ್ರಾದಾಯದ ಭಕ್ತರಾದ ಚೌಡಿಕೆಯವರು ಸಹ ಮುಖ್ಯರು, ಇವರು ಕರ್ನಾಟಕದ ಉತ್ತರ ಭಾಗದ ನೋಣವಿನಕೆರೆ, ಚಿಕ್ಕನಾಯಕನಹಳ್ಳಿ, ತುರುವೆಕೆರೆ, ಹೊಸದುರ್ಗ ಭಾಗದಲ್ಲಿ ದಕ್ಷಿಣ ಕರ್ನಾಟಕದ ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಅಲ್ಲಲ್ಲಿ ಹರಡಿಕೊಂಡಿರುವುದನ್ನ ಕಾಣುತ್ತೇವೆ. ಇವರು ತಾಯಿ ರೇಣುಕೆಯ ಎಲ್ಲಮ್ಮನ ಚರಿತೆಯನ್ನು ಮಹಿಮೆಯನ್ನು ಹಾಡುತ್ತಾರೆ. ಇವರು ಬಳಸುವುದು 'ಚೌಡಿಕೆ' ಎಂಬ ವಾದ್ಯ. ಇದು ಎಲ್ಲಮ್ಮನ ಆರಾಧಕರಿಗೆ ಪೂಜ್ಯ ವಸ್ತು ಏಕೆಂದರೆ ಕಾರ್ತವೀರ್ಯನ ತಲೆಯನ್ನು ಎಲ್ಲಮ್ಮ ತುಳಿಯುತ್ತಾಳೆ. ಇದ್ದರಿಂದ ಇದರಿಂದ ಕೊಳಗದಾಕಾರವನ್ನು ಈತನ ತಲೆಯೆಂದು ತಿಳಿದು ಅದರ ಮೇಲೆ ಎಲ್ಲಮ್ಮನ 'ಕೈಯಾರ' ಎಂಬ ಹೆಸರಿನ ಪಾದದ ಗುರುತು ಇದೆಯೆಂದು ಅದನ್ನು ಪೂಜಿಸುತ್ತಾರೆ. ಚೌಡಿಕೆಯ ಬಗ್ಗೆ ದಂತಕಥೆಯೊಂದು ಇದೆ. ತಂದೆಯ ಕಾಮದೇನುವನ್ನು ಕದ್ದು ಹೋದ ಒಯ್ದಾ, ಕಾರ್ತವೀರನ ಶಿರವನ್ನು ಪರಶುರಾಮ ಕತ್ತರಿಸಿ ಆತನ ತಲೆಯಿಂದ ಕೊಳಗದಾಕಾರವನ್ನು ಅವನ ಕರುಳನ್ನು ತಂತಿಯ ರೀತಿ ಅದಕ್ಕೆ ಕಟ್ಟಿ ನುಡಿಸುತ್ತಾರೆ. ಅವರು ಹೆಗಲಿಗೆ ನೇತು ಹಾಕಿಕೊಳ್ಳುವ ಬಟ್ಟೆಯದಾರವು ಆತನ 'ಗ್ವಾಮಾಳೆ' ಎಂದು ಕೆಂಪು ಪಟ್ಟಿಯುಳ್ಳದನ್ನು ಬಳಸುತ್ತಾರೆ. ಪ್ರಸ್ತುತವಾಗಿ ಇವರು ಮರದ ಅಥವಾ ಲೋಹವನ್ನು ಕೊಳಗದಾಕಾರಕ್ಕೆ ಬಳಸುತ್ತಾರೆ. ಇದರ ಮೆಲೆ ಆಡುವರಿ ಚರ್ಮ ಅಥವಾ ಬಾತಕೋಳಿಯ ಚರ್ಮದಿಂದಲೇ ಮಾಡಿದ ಮುಸುಕ್ಕನ್ನು ಬಳಸುತ್ತಾರೆ. ಅದಕ್ಕೆ ಗಳುವನ್ನು ಬಳಸುತ್ತಾರೆ. ಗಳುವಿನ ತುದಿಗೆ ಕುರಿಯ ಕರುಳನ್ನೊ ಅಥವಾ ಕುರಿಯಬೆನ್ನಿನ ನರದಿಂದಲೋ ಕಟ್ಟಿ, ಇನ್ನೊಂದು ತುದಿಯಲ್ಲಿ ಕೊಳಗದಾಕಾರದ ಒಳಗಡೆಗೆ ಎಳೆಯ ಕಟ್ಟಿರುತ್ತಾರೆ. ಇದು ಏಕತಾರಿಗೆ ಹೊಲಿಕೆಯಾಗಿರುವುದನ್ನು ಕಾಣಬಹುದು.

ಚೌಡಿಕೆಯವರು ಸಾಮಾನ್ಯವಾಗಿ ತಲೆಗೆ ಹಳದಿ ಅಥವಾ ಕೆಂಪು ಬಣ್ಣದ ಪೇಟ, ಹಳದಿ ಅಂಗಿ, ಕರಿಯಕೋಟು, ಹಳದಿ ಪಂಚೆಕಾಸೆ ಹಳದಿ ಶಲ್ಯ, ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಕೈಯಲ್ಲಿ ಚೌಡಿಕೆಯನ್ನು ಹಿಡಿದುಕೊಂಡು ಇವರು ಸಾಹಿತ್ಯ, ಸಂಗೀತ, ನೃತ್ಯ ಮೂರನ್ನು ಏಕಕಾಲದಲ್ಲಿ ಚೌಡಿಕೆಯ ಮೇಳಗಳಲ್ಲಿ ಕಾಣಬಹುದಾಗಿದೆ. ಇವರು ಚಂಪೂ ಕಾವ್ಯದ ರೀತಿಯಲ್ಲಿ ಪದ್ಯ ಮತ್ತು ಗದ್ಯ ಮಿಶ್ರಿತವಾಗಿ ವಿಶಿಷ್ಟ ಛಂದಸ್ಸಿನಿಂದ ಹಾಡುವುದರಿಂದ ಇದು ಕೇಳುಗರ ಮನಸ್ಸನ್ನು ಸೆಳೆಯುತ್ತದೆ.

ಮೂಲದಲ್ಲಿ ದ್ರಾವಿಡ ದೇವತೆಯಾಗಿದ್ದ ಎಲ್ಲಮ್ಮನನ್ನು ಕ್ರಮೇಣ ಎಲ್ಲರು ಪೂಜಿಸುವುದನ್ನು ನೋಡಬಹುದಾಗಿದೆ. ಗಂಡನ ಕಾಮದೇನುವನ್ನು ಕದ್ದ ಕಾರ್ತವೀರನ ಬಗ್ಗೆ ಕೋಪವನ್ನು ತಳೆದುದ್ದನ್ನು ವರ್ಣಿಸುತ್ತಾರೆ.

"ಎಲ್ಲಮ್ಮನೆಂದರೆ ಎಲ್ಲರಿಗೆ ದೊಡ್ಡೋಳು

ಇವಳು ದಿರುಳಿರಾಯನ ಹಿಡಿದಾಳೆ – ಮಂಡೆಯ ಮೇಲೆ

ಬೆಳ್ಳಿ ಹಡಲಿಗೆಯ ಹೋರಿಸ್ಯಾಳೆ – ಕರುಣೆ ಕಣ್ಣ ತೆರೆಯ"[16]

ಎಂದು ರೇಣುಕೆಯ ಮತ್ತು ಅವಳ ಮಗ ಪರಶುರಾಮನ ಮಹಿಮೆಯನ್ನು ಹಾಡುತ್ತಾರೆ.

**4. ಗೊಂದಲಿಗರು**

ಗೊಂದಲಿಗರು ಸಹ ಚೌಡಿಕೆಯವರಂತೆ ಎಲ್ಲಮ್ಮ ತಾಯಿಯ ಭಕ್ತರು, ಆದರೆ ಇವರ ಕುಲದೇವತೆ ಮಹಾರಾಷ್ಟದಲ್ಲಿರುವ ತುಳಜಾಪುರದ ಅಂಬಾಭವಾನಿ ಇಲ್ಲಿಯು ಸಹ ರೇಣುಕೆಯ ಮತ್ತು ಪರಶುರಾಮನ ಚರಿತ್ರೆ ಬರುವುದನ್ನು ಕಾಣಬಹುದು. ಗೊಂದಲಿಗರು ಮಹಾರಾಷ್ಟ್ರದ ಕೆಲವು ಭಾಗದಲ್ಲಿ ಮತ್ತು ಉತ್ತರ ಕರ್ನಾಟಕದ ಹೆಚ್ಚು ಭಾಗದಲ್ಲಿ ಕಂಡು ಬರುತ್ತಾರೆ. ಕರ್ನಾಟಕದಲ್ಲಿ ಇವರನ್ನು ಜೋಗಿಯರು ಎಂದು ಕರೆಯುತ್ತಾರೆ.

ಇವರು ಚೌಡಿಕೆ, ಸಂಬಾಳ ಅನ್ನುವ ಜೋಡಿ ತಬಲಗಳು ಮತ್ತು ಪತ್ತ ಎಂಬ ತಳಾಗಳನ್ನು ಕಡ್ಡಾಯವಾಗಿ ಬಳಸುತ್ತಾರೆ. ಇಲ್ಲ ಪ್ರಧಾನ ಹಾಡುಗಾರ ಈ ಪತ್ತೆವನ್ನು ಹಿಡಿದು ಕಥೆಯನ್ನು ಸುರು ಮಾಡುತ್ತಾನೆ. ಇವರು ವೀರರಸ ಪ್ರಧಾನವಾದ ಲಾವಣಿಗಳನ್ನು ದೇಶಭಕ್ತರ ಕಥೆಯನ್ನು ಕುಣಿಯುತ್ತಾ ಹಾಡುತ್ತಾರೆ. ಇವರು ಚೌಡಿಕೆಯವರ ರೀತಿಯಲ್ಲಿ ಎಲ್ಲೆಂದರಲ್ಲಿ ಮೇಳಗಳನ್ನು ಕಟ್ಟಿದೆ, ದೇವಿಯ ಮುಂದೆ ಮಾತ್ರ ಮೇಳಕಟ್ಟಿ ಕುಣಿಯುತ್ತಾ ಹಾಡುತ್ತಾರೆ. ಇದಕ್ಕೆ ಅವರು 'ಗೊಂದಲ' ಹಾಕುವುದು ಎಂದು ಕರೆಯುತ್ತಾರೆ. ಇವರು ಮಾತನಾಡುವ ಭಾಷೆ ಶುದ್ಧ ಕನ್ನಡವಲ್ಲ. ಇವರ ಮನೆಮಾತು ಮರಾಠಿ, ಆದರೆ ಇವರು ಕಥೆಯನ್ನು ಕನ್ನಡದಲ್ಲಿ ಹಾಡುತ್ತಾರೆ. ಇವರನ್ನು ಉತ್ತರದ ಮರಾಠಿ ಚೌಡಿಕೆಯವರು ಎಂಬುದಾಗಿಯು ಕರೆಯುವುದು ರೂಢಿಯಲ್ಲಿದೆ.

ಇವರು ತಲೆಗೆ ಮುಂದಾಸು, ಕಾಲಿಗೆ ಗೆಜ್ಜೆಯನ್ನು ಮೈ ಮೇಲೆ ಲಂಗದ ರೀತಿಯ ಬಣ್ಣದ ಅಂಗಿಯನ್ನು ಧರಿಸುತ್ತಾರೆ. ಅದರ ಮೇಲೆ ಶಲ್ಯವನ್ನು ಹಾಕಿ ಹಣೆಗೆ ಸಿಂಧೂರವನ್ನು

[16] ಡಾ॥ ಕಾಳೇಗೌಡ ನಾಗವಾರ 'ಜನಪದ ಸಾಹಿತ್ಯ' ಪುಟ ಸಂಖ್ಯೆ : 151

ಹಚ್ಚಿಕೊಂಡು ಹಾಡುತ್ತಾರೆ. ಇವರು ಈ ಮೇಳವನ್ನು ಪವಿತ್ರ ಕಾರ್ಯವೆಂದು ಬಾವಿಸಿದ್ದಾರೆ. ಇವರು ವೀರರ ಮತ್ತು ದೇಶಭಕ್ತರ ಕಥೆಗಳನ್ನು ಮೈ ಮರೆತು ಕುಣಿಯುತ್ತಾ ಹಾಡುತ್ತಾರೆ. ಲೌಖಿಕವಾದ, ಕಾಲ್ಪನಿಕವಾದ, ಭಯಾನಕವಾದ ಆನೇಕ ಕಥೆಗಳನ್ನು ಅಲ್ಲದೆ ತಮ್ಮ ಆರಾಧ್ಯ ದೇವತೆ ಅಂಬಾಭವಾನಿಯ ಮಹಿಮೆಯನ್ನು ಹಾಡುತ್ತಾರೆ.

"ಬಾರವ್ವ ಜಗದಂಬಿ। ರಂಗಗೊಂದುಳದಲ್ಲಿ
ಚೌಡಂಕಿ ಸ್ವರದಲ್ಲಿ । ತಾಳೆ ಸಂಬಾಳದಲ್ಲಿ
ಬಾರವ್ವ ಜಗದಂಬಿ । ಭಕ್ತರ ಭಾವಕನೆಂಬಿ"[17]

ಹೀಗೆ ರಾತ್ರಿಯಿಡೀ ಮುಂದುವರಿಸಿಕೊಂಡು ಹೋಗುತ್ತಾರೆ. ಆನೇಕಾರು ಕಾಲ್ಪನಿಕ ಕಥೆಗಳನ್ನು ಜನರ ಮನರಂಜನೆಗಾಗಿ ಹಾಡುಗಳನ್ನು ಸೇರಿಸಿ 'ಚಿಂತಿ ಬಿಡಿಸಾ ಮನದ । ಜಗದಂಬಾದೇವಿ । ಚಿಂತಿ ಬಿಡಿಸಾ ಮನದ । ಎಂದು ಹಾಡುತ್ತಾರೆ.

**5. ಗೊರವರು**

ಕರ್ನಾಟಕದ ಬೇರೆ ಬೇರೆ ಕಡೆಗಳಲ್ಲಿ ಕಾಣಿಸಿಕೊಳ್ಳುವ ಗೊರವರು ಮೈಲಾರ ಲಿಂಗನ ಧಾರ್ಮಿಕ ಸಂಪ್ರದಾಯದವರು. ಹೆಚ್ಚಾಗಿ ಯಾವ ಕಡೆಯಲ್ಲಿ ಇರುತ್ತಾರೆ ಎಂಬುದು ತಿಳಿಯದು, ಇವರ ಕಥೆಯಲ್ಲಿ, ಮುಡುಕುತೊರೆ ಮಲ್ಲಪ್ಪನ ಪ್ರಸ್ತಾಪ ಬಂದಿರುವುದರಿಂದ ಇವರು ಮೈಸೂರು, ಚಾಮರಾಜನಗರ ಜಿಲ್ಲೆಗಳಲ್ಲಿ ಹೆಚ್ಚಾಗಿ ಇರಬಹುದು ಎಂದೆನಿಸುತ್ತದೆ. ಈ ಪದ್ಧತಿ ಇತ್ತೀಚೆಗೆ ಹೆಚ್ಚಾಗಿ ಕಂಡು ಬರುತ್ತಿಲ್ಲ. ಇವರು ಮೈಲಾರ ಲಿಂಗನನ್ನು ಕುರಿತಕಾವ್ಯ, ಸ್ಥಳ ಪುರಾಣಗಳು, ಜನಪದ ಕಥೆಗಳನ್ನು ದೇವ ಮಹಿಮೆ ಮತ್ತು ಪವಾಡಗಳು ಸ್ವಾರಸ್ಯಕವಾಗಿ ಹೇರಳವಾಗಿ ಹಾಡುತ್ತಾರೆ. ಇವರನ್ನು ಗೊರವರು, ಗೊರವಗೊಗ್ಗಯ್ಯ, ಗೊಡಬಡ್ಡಯ್ಯ, ಕಡಕಬ್ಬಾ ಎಂದು ಅನೇಕ ಹೆಸರುಗಳಿಂದ ಕರೆಯುತ್ತಾರೆ. ಇವರಿಗೆ ಈ ಹೆಸರು ಬರಲು ಅವರ ಕೈಯಲ್ಲಿ ಹಿಡಿದ ಡಮರುಗ ಕಾರಣವಿರಬೇಕು. ಇವರು ಡಮರುಗ ಮತ್ತು ಪಿಳ್ಳಂಗೋವಿ ಬಳಸಿ ಹಾಡುತ್ತಾರೆ.

ಇವರ ಅಲಂಕಾರ ವೈವಿಧ್ಯತೆಯಿಂದ ಕೂಡಿರುತ್ತದೆ. ಇವರು ಕಂಬಳಿಯ ಕಪ್ಪು ನಿಲುವಂಗಿಯನ್ನು ಧರಿಸಿರುತ್ತಾರೆ. ಮೇಲೆ ಇಂಟು ಆಕಾರದಲ್ಲಿ ಕೆಂಪು ಪಟ್ಟಿಯ ಮೇಲೆ ಅಲಂಕಾರವಾಗಿ ಕವಡೆಗಳನ್ನು ಜೋಡಿಸಿರುತ್ತಾರೆ. ಕೊರಳಲ್ಲಿ ಹುಲಿಯ ಚರ್ಮದಿಂದ ಮಾಡಿದ

---

[17] ಕಾಳೇಗೌಡ ನಾಗವಾರ, ಜನಪದ ಸಾಹಿತ್ಯ, ಪುಟ ಸಂಖ್ಯೆ : 156

ವಿಭೂತಿ ಚೀಲವಿರುತ್ತದೆ. ಕಂಕುಳಲ್ಲಿ ಜೋಳಿಗೆ, ನಡುವಿಗೆ ಕವಡೆಯ ಪಟ್ಟಿ, ಹೆಗಲ ಮೇಲೆ ಬಿಳಿಯ ವಸ್ತ್ರ, ಕುತ್ತಿಗೆಯ ತುಂಬ ರುದ್ರಾಕ್ಷಿಮಣಿ, ತ್ರಿಶೂಲ ತಲೆಯ ಮೇಲೆ ಕರಡಿಯ ಚರ್ಮ ಹೀಗೆ ಅವರು ವಿಶಿಷ್ಟ ರೀತಿಯಲ್ಲಿ ಕಾಣುತ್ತಾರೆ. ಕಾಲಿಗೆ ಗೆಜ್ಜೆ ಎಲೆಸಂಚೆ, ಪಿಳ್ಳಿಂಗೋವಿಗಳನ್ನು ಧರಿಸಿದ ಇವರ ಗುಂಪು ನೃತ್ಯ ಮಾಡಿದರೆ ತುಂಬಾ ಆಕರ್ಷಿಕವಾಗಿ ಅದ್ಭುತವಾಗಿ ಕಾಣುತ್ತದೆ.

ರಾತ್ರಿಯ ವೇಳೆಯಲ್ಲಿ ಗೊರವರ ಮೇಳಗಳು ನಡೆಯುತ್ತವೆ. ಮುಖ್ಯ ಕತೆಗಾರ ಕಥೆಯನ್ನು ನಿರೂಪಿಸಿದರೆ, ಹಿಮ್ಮೇಳದವರು ಇದಕ್ಕೆ ಧ್ವನಿ ಗೂಡಿಸುತ್ತಾರೆ. ಮೈಲಾರ ಲಿಂಗ ಗೊರವನ ವೇಷದಲ್ಲಿ ಬಂದು ತುಪ್ಪದ ಮಾಳವ್ವನನ್ನು ಮದುವೆಯಾಗಲು ರಾಕ್ಷಷನನ್ನು ಕೊಂದ ಎಂದು ಒಂದು, ಇನ್ನೊಂದು ತುಪ್ಪದ ಮಾಳವ್ವನನ್ನು ಮದುವೆಯಾಗುವ ಆಸೆಯಿಂದ ಅವಳ ಅಣ್ಣಂದಿರ ಜೋತೆ ಹೋರಾಡಿ ಅವರಿಗೆ ಗೊರವನ ವೇಷವನ್ನು ಕೊಟ್ಟು ಅವನನ್ನು ಕರೆದುಕೊಂಡು ಹೋಗಿ ಮದುವೆಯಾದ ಬಗೆಯನ್ನು ಇವರು ಹಾಡುಗಳಲ್ಲಿ ಕಟ್ಟಿ ಮೇಳಗಳಲ್ಲಿ ಹಾಡುತ್ತಾರೆ.

ಶೈವ ಸಂಪ್ರದಾಯಕ್ಕೆ ಸೇರಿದ ಗೊರವರಿಗೆ ಮೈಲಾರಲಿಂಗನ ಆರಾಧ್ಯ ದೈವ. ಇವರಲ್ಲಿ ಹಿರಿಯ ಮಗನಿಗೆ ಗೊರವಯ್ಯನ ದೀಕ್ಷೆಯನ್ನು ಕೊಡುತ್ತಾರೆ. ದೀಕ್ಷೆಯಾದ ಮೇಲೆ ಅವನು ಚಪ್ಪಲಿಮೆಟ್ಟುವಾಗಿಲ್ಲ ತಂದೆ ತಾಯಿಯರನ್ನು ಬೈಯುವ ಆಗಿಲ್ಲ. ಹಾವನ್ನು ಹೊಡೆಯುವ ಆಗಿಲ್ಲ. ಇವರು ಹಬ್ಬಗಳಲ್ಲಿ ಜಾತ್ರೆಗಳಲ್ಲಿ ಹಾಡುತ್ತಾರೆ.

**6. ಜೋಗಿಗಳು.**

ಚುಂಚನಗಿರಿ ಬೈರವನ ಸಂಪ್ರದಾಯವರು ಈ ಜೋಗಿಗಳು. ಇವರು ಬೈರವೇಶ್ವರ ಮಾಳವ್ವನ ಕತೆಯನ್ನು 'ಅರ್ಜುನ ಜೋಗಿಯ ಹಾಡು' ಎನ್ನುವ ಕೃತಿಯಲ್ಲಿ ಸೇರಿಸಿ ಹಾಡುತ್ತಾರೆ. ಇವರು ಮಂಡ್ಯ, ಮೈಸೂರು, ಶಿವಮೊಗ್ಗ, ಚಿತ್ರದುರ್ಗ, ದಕ್ಷಿಣ ಕನ್ನಡ ಜಿಲ್ಲೆ, ಬಳ್ಳಾರಿ ಮತ್ತು ದಾರವಾಡ ಜಿಲ್ಲೆಗಳಲ್ಲಿ ಅದರಲ್ಲೂ ಒಟ್ಟಾರೆ ದಕ್ಷಿಣ ಕರ್ನಾಟಕದಲ್ಲಿ ಹೆಚ್ಚಾಗಿ ಕಂಡು ಬರುತ್ತಾರೆ. ಇವರು ಕಿನ್ನರಿಯನ್ನು ನುಡಿಸುವುದರಿಂದ ಇವರನ್ನು 'ಕಿನ್ನರಿ ಜೋಗಿಯರು' ಎಂದು ಸಹ ಕರೆಯುತ್ತಾರೆ. ಇವರು ನುಡಿಸುವ ಈ ಕಿಂದರಿ ಜೋಗಿಗಳಿಗೆ ಪೂಜ್ಯ ವಸ್ತು ಸಹ ಇದನ್ನ ಒಂದು ಬಿದರಿನ ದೊಣ್ಣೆಗೆ ಎರಡು ಅಥವಾ ಮೂರು ಬುರುಡೆಗಳನ್ನ ಜೋಡಿಸಿ ಮಾಡಿಕೊಂಡಿರುತ್ತಾರೆ. ಇವರು ಕಿನ್ನರಿ, ಡಮರುಗ, ಪಿಳ್ಳಂಗೋವಿ, ತಾಳೆ, ಚಟಗಿ, ಗಗ್ಗರ, ಕಾಲಿಗೆ ಕಿರುಗೆಜ್ಜೆಗಳಿಂದ ಮೇಳ ಕಟ್ಟಿ ಹಾಡುತ್ತಾರೆ.

ಜೋಗಿಗಳು ಹಣೆಯಲ್ಲಿ ಎರಡು ತೋಳಿನ ಮೇಲೆ, ಮೈ ಕೈ ಮೇಲೆ ಕಿವಿಯ ಕರ್ಣ ಕುಂಡಲದ ಮೇಲೆ, ಕತ್ತಿಗೆ ವಿಭೂತಿಯನ್ನು ಹಚ್ಚಿ ಕೊಂಡಿರುತ್ತಾರೆ. ಈ ಕರ್ಣಕುಂಡಲಕ್ಕೆ ಕಾಮಾಕ್ಷಿ, ಮುದ್ರೆ ಎಂಬ ಹೆಸರಿನಿಂದಲೂ ಕರೆಯುತ್ತಾರೆ. ಕೊರಳಲ್ಲಿ ಒಂದುದಾರ ಅದಕ್ಕೆ ಒಂದು ಸಣ್ಣ ಸಿಂಗನಾಥವನ್ನು ಹಾಕಿರುತ್ತಾರೆ. ಕಾವಿ ಬಟ್ಟೆಯ ಮೈ ಮೇಲೆ ಹಾಕಿಕೊಂಡು ತಲೆಗೆ ಕಾವಿ ಪೇಟ ಸುತ್ತಕೊಂಡಿರುತ್ತಾರೆ. ಕೈಯಲ್ಲಿ ಬೆತ್ತದ ಕೋಲನ್ನು ಹಿಡಿದು, ಕಂಕುಳಲ್ಲಿ, ಚರ್ಮದ ಜೋಳಿಗೆಯನ್ನು ಈ ಜೋಳಿಗೆಯಲ್ಲಿ ಸಿಂಗನಾಥ, ಬಿಕ್ಷಾಪಾತ್ರೆ, ವಿಭೂತಿ ಮುಂತಾದವುಗಳನ್ನ ಇಟ್ಟು ಕೊಂಡಿರುತ್ತಾರೆ. ಈ ಮನೆತನದಲ್ಲಿ ಹುಟ್ಟಿದ ಹಿರಿಯ ಮಕ್ಕಳನ್ನು 'ಜೋಗಿ' ಬಿಡುತ್ತಾರೆ. ಅವರು ಬೇರೆಯವರ ಎಂಜಲನ್ನು ತಿನ್ನುವ ಹಾಗಿಲ್ಲ. ಇವನ ಕಿವಿಯಲ್ಲಿ ಹಾಕಿದ ಮುದ್ರೆಯನ್ನು ಸಾಯುವತನಕ ತೆಗೆಯಬಾರದು. ಇದು ದೇವರ ಪ್ರತೀಕವಾಗಿರುತ್ತದೆ. ಇವರು ಕಂಚಿನ ತಟ್ಟೆಯಲ್ಲಿ ಊಟ ಮಾಡಬಾರದು.

ಇವರು ಭೈರವೇಶ್ವರ ಲೀಲೆಗಳನ್ನು ಮಹಿಮೆಯನ್ನು ಕುರಿತು ಹಾಡುತ್ತಾರೆ. ಮೊದಲು ಭೈರವೇಶ್ವರ ಜೋಗಿಯ ರೂಪದಲ್ಲಿ ಇದ್ದ ಎಂಬುದು ಅವನು ಈ ವೇಷದಿಂದ ತಿರುಪತಿ ವೆಂಕಟೇಶ್ವರ ರಥವನ್ನು ಕಳ್ಳತನ ಮಾಡಿದ ಎಂಬುವುದನ್ನು ಮಾಳವ್ವನ ಬಗ್ಗೆ ಹೀಗೆ ಹಾಡುಗಳನ್ನ ಕಟ್ಟಿ ಹಾಡುತ್ತಾರೆ.

"ಅಣ್ಣಾನ ಗಿರಿಮ್ಯಾಲೆ ಆಲಾದ ಮರವುಟ್ಟಿ
ಆಲಾದ ಮರದ ನೆರಳಲ್ಲಿ । ಬೈರೂಪ
ಆಲು ಮಾರುವೋರಿಗೆ ನೆರಳಾದೋ"[18]

**7. ಕರಪಾಲದವರು**

ಇದೊಂದು ಶುದ್ಧ ಜನಪದ ಕಲೆಯಾಗಿದೆ. ಮುಖ್ಯ ಎನ್ನುವ ಯಾವುದೇ ಸಂಪ್ರದಾಯಕ್ಕೆ ಸೇರಿದಂತೆ ಕಾಣುವುದಿಲ್ಲ. ಇವರನ್ನು ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕದಲ್ಲಿಯೂ ಅಲ್ಲಲ್ಲಿ ಪ್ರಚಲಿತವಾದ ಕಲಾವಿದರು. ಇವರು ತಮ್ಮ ಕೈಬೆರಳಿನ ಸನ್ನಯಿಂದಲೇ ಇಷ್ಟ ಪಟ್ಟ ಪ್ರೇಕ್ಷಕರ ಹೆಸರನ್ನು ಹೇಳುವ ಕಲೆ ಈ ಮೇಳಗಳಲ್ಲಿ ಮೊದಲಿನಿಂದಲೂ ರೂಡಿಯಲ್ಲಿದೆ. ಇವರು ಘುಮಕಿ ಮತ್ತು ದಮ್ಮಡಿಗಳನ್ನು ತಾಳೆಗಳನ್ನ ಬಳಸಿ ಹಾಡುತ್ತಾರೆ. ದಮ್ಮಡಿಗಳಲ್ಲಿ ಪ್ರಾಣಿಗಳ ಚರ್ಮದ ಹೊದಿಕೆಯನ್ನ ನೋಡಬಹುದು.

---

[18] ಡಾ॥ ಚಂದ್ರಶೇಖರ್ ಕಂಬಾರ್, ಕನ್ನಡ ಜನಪದ ವಿಶ್ವಕೋಶ, ಪುಟ್ಟಸಂಖ್ಯೆ 904.

ಇವರು ತಲೆಯ ಮೇಲೆ ಬಟ್ಟೆಯ ಕುಲಾಬಿ, ಮುಖದ ತುಂಬ ವಿಭೂತಿಯನ್ನು ಧರಿಸುತ್ತಾರೆ. ಕುತ್ತಿಗೆಯಲ್ಲಿ ರುದ್ರಾಕ್ಷಿಸರ, ಮೈಗೆ ಕಾವಿಯ ನಿಲುವಂಗಿ ಕಚ್ಚೆಯ ಪಂಜೆ, ಕಿವಿಯಲ್ಲಿ ಕರ್ಣಕುಂಡಲ, ಕಾಲಿಗೆ ಗೆಜ್ಜೆ, ಸೊಂಟಕ್ಕೆ ಕರವಸ್ತ್ರ ಈ ತರಹದ ಉಡುಗೆಯನ್ನು ತೊಟ್ಟುಕೊಂಡಿರುತ್ತಾರೆ.

ಮೂರುಜನ ಸೇರಿ ಮೇಳವನ್ನು ನಡೆಸುತ್ತಾರೆ. ಪ್ರಧಾನವಾಗಿ ಒಬ್ಬನಿಂತು ಹಾಡಿದರೆ ಅಕ್ಕಪಕ್ಕ ಇಬ್ಬರು ಹಿಮ್ಮೇಳವಾಗಿ ನಿಲ್ಲುತ್ತಾರೆ. ಕಾಡು ಸಿದ್ದಮ್ಮನ ಕಥೆ, ನೀಲಕಂಠ, ರೂಪವತಿ, ಬಸವಪುರಾಣ, ಬಸವಕುಮಾರ ಲೋಹಿತಕುಮಾರ, ರುದ್ರೇಶ್ವರ ಮಹಾತ್ಮೆ ಇನ್ನು ಮುಂತಾದ ನಾಯಕ, ನಾಯಕಿಯರ ಕತೆಗಳನ್ನು ಇವರು ಮೇಳಗಳಲ್ಲಿ ಹಾಡುತ್ತಾರೆ.

"ನಾವು ಬಲ್ಲವರಲ್ಲಿ ನಾವು ತಿಳಿದವರಲ್ಲ

ಯಾವ ತಪ್ಪಿದ್ದರೂ ತಿದ್ದಿಕೊಳಬೇಕು

ತಿದ್ದಿ ಕೊಳಬೇಕು

ದಿತ್‌ತಳಾಂಗು ತದಥಿಮಿತ."[19]

ಹೀಗೆ ಇವರು ತಮ್ಮ ಪರಿಮಿತವಾದ ಜ್ಞಾನವನ್ನು ಪ್ರೇಕ್ಷಕರಿಗೆ ಹೇಳಿ ಕೊಳ್ಳುತ್ತಾ ಕಥೆಯನ್ನು ಮುಂದುವರಿಸುತ್ತಾರೆ.

**8. ಹೆಳವರು**

ವಂಶಾವಳಿಯನ್ನು ಹೊಗಳುವ ಪರಂಪರೆಯವರು ಈ ಹೆಳವರು. ಇದಲ್ಲದೆ ಚಾಮುಂಡಿ ನಂಜಯ್ಯ, ಬೈರವ, ಲಕ್ಕಮ್ಮ, ಕಲಿಬಂಟ, ಮಾಗಡಿ ಕೆಂಪೇಗೌಡ, ಬಾಲನಾಗಮ್ಮ ಮುಂತಾದ ಕತೆಗಳನ್ನು ಹಾಡುತ್ತಾರೆ. ಇವರು ಕರ್ನಾಟಕ ಎಲ್ಲಾ ಕಡೆಯಲ್ಲಿಯು ಕಂಡು ಬರುವ ಮನೆತನದವರು ಪ್ರತ್ಯೇಕವಾದ ಹಟ್ಟಿಗಳನ್ನು ಕಟ್ಟಿಕೊಂಡು ವಾಸಮಾಡುತ್ತಾರೆ. ಇವರ ಮಾತೃಭಾಷೆ ತೆಲುಗು, ಇವರ ಕಾವ್ಯ ಭಾಷೆ ಕನ್ನಡ, ಕಂಕುಳಲ್ಲಿ ಬಾರಿ ಜೋಳಿಗೆಯನ್ನು ಹೊತ್ತು ದವಸದಾನ್ಯಗಳ ಹೇರನ್ನು ಬಸವನ ಮೇಲೆ ಹಾಕಿ ಇವರು ಕಿಣಿಕಿಣಿನಾದ ಮಾಡುವ ಗಂಟೆಯನ್ನು ಬಾರಿಸಿಕೊಂಡು, ರಾಗವಾಗಿ ಹಾಡುತ್ತಾ ಬರುತ್ತಾರೆ. ಮನೆ ಮುಂದೆ ನಿಂತು ಕುಲ ಪುರಾಣವನ್ನ ಯಜಮಾನರುಗಳ, ಹಿರಿಯರ ಸದ್ಗುಣಗಳನ್ನ ಹಲವಾರು ವಿಶೇಷಗಳ ಜೊತೆಗೆ

---

[19] ಡಾ॥ ಪಿ.ಕೆ.ರಾಜಶೇಖರ, ಜನಪದ ಸಂಭ್ರಮ, ಪುಟ ಸಂಖ್ಯೆ 270

ಕೂಡಿಸಿಕೊಂಡು ಕೊಂಡಾಡುತ್ತಾ ಇಂಪಾಗಿ ಹಾಡುತ್ತಾರೆ. ಇವರು ಅಂಗಿಯ ಮೇಲೆ ಕೆಂಪಿನ ವಸ್ತ್ರವನ್ನು ಧರಿಸಿರುತ್ತಾರೆ. ತಲೆಗೆ ಪೇಟವನ್ನು ಕಟ್ಟಿಕೊಂಡ ಕೈಯಲ್ಲಿ ಗಂಟೆಯನ್ನು ಹಿಡಿದುಕೊಂಡಿರುತ್ತಾರೆ. ಇವರು ಒಕ್ಕಲಿಗರ ಆಳು ಮಕ್ಕಳು ಎಂದು ಹೇಳಿಕೊಂಡು ವರ್ಷಕೊಮ್ಮೆ ಬಂದು ಅವರ ಕುಲದವರ ಹತ್ತಿರ ದವಸದಾನ್ಯ ಬಟ್ಟೆಗಳನ್ನು ಬೇಡಿ ಪಡೆಯುತ್ತಾರೆ.

"ನಿನ್ನ ಕುಲವೆತ್ತಿ ಕೊಂಡಾಡೆವೊ ರಾಮಾರಾಮು

ಆನೆ ಕುಲದ ಗೌಡರ ಮುದ್ದಿನ ಮಗಳೆ ರಾಮಾರಾಮು

ನಿನ್ನ ಕುಲ ವೆತ್ತಿ ಕೊಂಡಾಡೆವೊ ರಾಮಾರಾಮು"[20]

ಎಂದು ಹಾಡುತ್ತಾ ಇದಲ್ಲದೆ ಇವರು ಚುಂಚನಗಿರಿ ಭೈರವನ ಬಗ್ಗೆ, ಚಾಮುಂಡಿ ಪುರಾಣವನ್ನು ಸಹ ಹಾಡುತ್ತಾರೆ.

**9. ತೆಲುಗು ಜಂಗಮರು**

ವೀರಶೈವ ಸಂಪ್ರದಾಯಕ್ಕೆ ಸೇರಿದ ವೃತ್ತಿಗಾಯಕರು. ಇವರು ಕರ್ನಾಟಕದ ತುಮಕೂರು ಜಿಲ್ಲೆಯಲ್ಲಿ ವಿಶೇಷವಾಗಿ ಕಾಣಿಸಿಕೊಳ್ಳುತ್ತಾರೆ. ಇವರ ಮಾತೃಭಾಷೆ ತೆಲುಗಾದರೂ, ಇವರ ಗಾಯನದ ಭಾಷೆ ಕನ್ನಡ. ತೆಲುಗು ಜಂಗಮರು ಆಂದ್ರಪ್ರದೇಶದಲ್ಲಿ ಲಾವಣಿಗಳನ್ನ ಹಾಡಿ ಅಲ್ಲಿಯ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಇವರು ವಚನಕಾರರ ಕಾಲದಲ್ಲಿ ಕರ್ನಾಟಕ್ಕೆ ಬಂದಂತಹ ವೀರಶೈವ ಜನಾಂಗದವರು. ಇವರು ಬಳಸುವ ವಾದ್ಯ ಏಕತಾರಿ, ಕಾಲಿಗೆ ಗೆಜ್ಜೆಕಟ್ಟಿಕೊಂಡು ಏಕತಾರಿಯನ್ನು ಹಿಡಿದು ಹಿಮ್ಮೇಳಗಾರರ ಜೊತೆಗೆ ಮುಖ್ಯ ಹಾಡುಗಾರರು ವೀರಾವೇಶದಿಂದ ಹಾಡುತ್ತಾರೆ.

ಇವರು ಹಣೆಗೆ ಭಸ್ಮ, ಕೊರಳಿಗೆ ರುದ್ರಾಕ್ಷಿ, ಲಿಂಗವನ್ನು ಧರಿಸಿರುತ್ತಾರೆ. ಇವರು ಊರೂರು ಸುತ್ತುತಿದ್ದು. ನಂತರ ಹೊಟ್ಟೆಪಾಡಿಗಾಗಿ ಹಾಡುಗಳನ್ನ ಕಲಿತು ಹಾಡಲು ಸುರು ಮಾಡಿದರು. ಇವರು ಬಿಕ್ಷುಕರಾಗಿ ಇದ್ದು ಕ್ರಮೇಣ ವ್ಯವಸಾಯ ಮಾಡಲು ಆರಂಭಿಸಿದರು. ಜಂಗಮ ಕತೆಗಳನ್ನು ಸಹ ಹಾಡಿ ಅವರ ವೈಶಿಷ್ಟವನ್ನು ಹೆಚ್ಚಿಸಿದ್ದಾರೆ. ಇವರು ಬಾಲನಾಗಮ್ಮ, ಸಿರಿಯಾಳ, ವಾಮನ ವಿಜಯ, ದೇವಯಾನಿ ಮುಂತಾದ ಕಥೆಗಳನ್ನು ಹಾಡುತ್ತಾರೆ.

---

[20] ಡಾ॥ ಕಾಳೇಗೌಡ ನಾಗವಾರ, ಜನಪದ ಸಾಹಿತ್ಯ, ಪುಟ ಸಂಖ್ಯೆ 165.

**10. ದೊಂಬಿದಾಸರು**

ಲೌಖಿಕ ವೃತ್ತಿಗಾಯಕರಲ್ಲಿ ದೊಂಬಿದಾಸರು ಒಬ್ಬರು. ಇವರಿಗೆ 'ದಂಡಿದಾಸ' ರೆಂದು ಸಹ ಕರೆಯುತ್ತಾರೆ. ಹಿಂದೆ ರಾಜಮಹಾರಾಜರು ಯುದ್ಧದ ಸಂದರ್ಭದಲ್ಲಿ ಜೊತೆಯಲ್ಲಿ ಕರೆದುಕೊಂಡು ಹೋಗಿ ಇವರಿಂದ ಗಾಯನ ನಾಟಕ ಮಾಡಿಸಿ ಮನರಂಜನೆ ಪಡೆಯುತ್ತಿದ್ದರಂತೆ. ಆದುದರಿಂದ ಇವರಗೆ ದಂಡಿದಾಸರು ಎಂಬ ಹೆಸರು ಬಂದಿತು. ಇವರು ಕರ್ನಾಟಕದ ಹಲವಾರು ಕಡೆ ಇದ್ದು. ಅದರಲ್ಲೂ ಹಾಸನದ ಕೆಲವೆಡೆ ಹೇರಳವಾಗಿ ಕಾಣಿಸಿಕೊಳ್ಳುತ್ತಾರೆ. ಇವರು ಬಳಸುವ ವಾದ್ಯ ತಂಬೂರಿ ಇದನ್ನ ದೊಡ್ಡಕುಂಬಳಕಾಯಿಯ ಬುರುಡೆಗೆ ಒಂದು ಬಿದುರಿನ ಗಳವನ್ನ ಸೇರಿಸಿ ಅದಕ್ಕೆ ಏಕತಾರಿಯ ರೀತಿಯಲ್ಲಿ ಸಣ್ಣ ತಂತಿಯನ್ನ ಕಟ್ಟಿಕೊಂಡಿರುತ್ತಾರೆ. ಇವರು ನೀಲಗಾರರ ರೀತಿಯಲ್ಲಿ ತಂಬೂರಿಯನ್ನ ಬಳಸುತ್ತಾರೆ. ಆದರೆ ಇವರು ಮಂಟೇಸ್ವಾಮಿಯ ಕತೆಗಳನ್ನ ಹಾಡುವುದಿಲ್ಲ. ಶಿವಶಂಕರರಾಯ, ರುದ್ರಕುಮಾರ, ಶೆಟ್ಟಿಗಾರ ತಿಮ್ಮಪ್ಪ ಹೀಗೆ ಜನಪದರಲ್ಲಿ ಬಳಕೆಯಲ್ಲಿರುವ ಕತೆಗಳನ್ನು ಹಾಡುತ್ತಾರೆ. ಇವರು ಮಾಡುವ ಕತೆಗಳ ನಡುವೆ ಅನೇಕಾರು ಉಪಕತೆಗಳನ್ನು ತಂಬೂರಿದನಿಗೆ ಸರಿಯಾಗಿ ಹಾಡುತ್ರಾರೆ.

**11. ಕಲ್ಗಿ – ತುರಾಯಿ**

ಕಲ್ಗಿ – ತುರಾಯಿ ಸಂಪ್ರದಾಯದವರು ಲಾವಣಿಗಳನ್ನು ಹಾಡುತ್ತಾರೆ. ಇದು ಕನ್ನಡ ಜನತೆಗೆ ಚಿರಪರಿಚಿತವಾದದು. ಇದಕ್ಕೆ 'ಹರದೇಶಿ ನಾಗೇಕಿ' ಎಂಬ ಹೆಸರಿನಿಂದಲೂ ಸಹ ಕರೆಯುತ್ತಾರೆ. ಉತ್ತರ ಕರ್ನಾಟಕದ ಕೆಲವೆಡೆಯಲ್ಲಿ ಇದನ್ನು ಕಾಣಬಹುದಾಗಿದೆ. ಕಲ್ಗಿ ಹೆಣ್ಣನ್ನು ಮತ್ತು ತುರಾಯಿ ಗಂಡನ್ನು ಪ್ರತಿನಿದಿಸುವ ಗುಂಪುಗಳು ಎದುರು ಬದುರು ನಿಂತು ಪ್ರಶ್ನೆ ಉತ್ತರದ ಮಾದರಿಯಲ್ಲಿ ಹಾಡುತ್ತಾರೆ. ಆರಂಭದ ಹಾಡನ್ನು 'ಸಖಿ' ಎಂದು ಕೊನೆಯ ಹಾಡನ್ನು 'ಖ್ಯಾಲಿ' ಎಂದು ಕರೆಯುತ್ತಾರೆ. ಇವರು ಕಾಲಿಗೆ ಗೆಜ್ಜೆಯನ್ನು ಕಟ್ಟಿಕೊಂಡು ದಪ್ಪು, ಕಿಂಕಿಣಿ, ತಾಳ ಮೊದಲಾದ ವಾದ್ಯಗಳನ್ನ ಬಳಸುತ್ತಾರೆ. ಕುಣಿತವು ಇರುತ್ತದೆ. ಇದರಲ್ಲಿ ಹಿಮ್ಮೇಳ ಮತ್ತು ಮುಮ್ಮೇಳಗಳು ಇವೆ.

**12. ಬಯಲು ಲಾವಣಿಗಳು**

ಒಬ್ಬರೇ ಹಾಡುವ ಲಾವಣಿಗಳನ್ನ ಬಯಲು ಲಾವಣಿಗಳು ಎಂದು ಕರೆಯುತ್ತಾರೆ. ಲಾವಣಿಗಳಲ್ಲಿ ಪ್ರಾಸ, ಒಳಪ್ರಾಸ, ಅಂತ್ಯ ಪ್ರಾಸಗಳು ಇರುತ್ತವೆ. ಇವುಗಳಲ್ಲಿ ಅಂತ್ಯ ಪ್ರಾಸದ

ಒಲವು ಹೆಚ್ಚಾಗಿದೆ. ಒಬ್ಬವ್ಯಕ್ತಿಕಟ್ಟಿದ ಲಾವಣಿಯನ್ನು ಪರಿಣತವಾದ ಬೇರೆ ಬೇರೆ ಹಾಡುಗಾರರು ಬೇರೆ ಬೇರೆ ರೀತಿಯಲ್ಲಿ ಹಾಡುತ್ತಾರೆ. ಇವರು ಚಾರಿತ್ರಿಕ, ಪಾರಾಣಿಕ, ನೀತಿಪರ ಮತ್ತು ವೀರಪ್ರಧಾನವಾದ ನಾನಾ ಬಗೆಯ ಹಾಡುಗಳನ್ನ ಹಾಡುತ್ತಾರೆ. ಇದಕ್ಕೆ ಶಿಷ್ಠ ಸಾಹಿತ್ಯದ ಪ್ರಭಾವವಾಗಿದ್ದು, ಜನಪದ ಅಂಶಗಳನ್ನ ಉಳಿಸಿಕೊಂಡು ಬಂದಿದೆ. ಪ್ರಸ್ತುತ ವಿಷಯದ ಬಗ್ಗೆಯ ಲಾವಣಿಗಳು ರೂಪುಗೊಂಡಿದೆ. ಇವರು ಶ್ರೀರಂಗಪಟ್ಟಣದ ಪತನ, ಹಲಗಲಿಯ ಬೇಡರು, ಸಂಗೋಳ್ಳಿ ರಾಯಣ್ಣ, ಸಂಗ್ಯಾನ ಅಪರಾಧ ಮತ್ತು ಸಾವು, ಕಿತ್ತೂರ ಚನ್ನಪ್ಪನ ಸೊಸೆ ಚಿತ್ರ ಮುಖದ ಹೆಣ್ಣು ನೀಲಾವತಿ ಬಾಲೆ, ಸತ್ಯಾಜಿತ ಅರಸು ಮುಂತಾದ ಉತ್ತಮ ಲಾವಣಿಗಳನ್ನು ಹಾಡುತ್ತಾರೆ.

ಕೇಳುಗರನ್ನು ಮಂತ್ರಮುಗ್ದರನ್ನಾಗಿ ಮಾಡುವ ಶಕ್ತಿ ಈ ಲಾವಣಿಗಳಿಗೆ ಇವೆ. ಜನತೆಯ ಬದುಕಿಗೆ ಹತ್ತಿರವಾದ ಲಾವಣಿಗಳನ್ನು ಇವರು ಹಾಡುತ್ತಾರೆ.

**13. ಗಣೆಯವರು**

ವೃತ್ತಿಗಾಯಕ ಪರಂಪರೆಯಲ್ಲಿ ಗಣೆಯವರು ವಿಶಿಷ್ಟವಾದ ಸಾಹಿತ್ಯವನ್ನು ಹೊಂದಿರುವವರು ಕಾಡುಗೊಲ್ಲರು. ಇವರು ತಮ್ಮ ದೇವರಾದ ಜುಂಜಪ್ಪನ ಗಣೆಯನ್ನು ಹೊತ್ತು ಊರೂರ ಮೇಲೆ ಜುಂಜಪ್ಪನ ಹರಕೆಯನ್ನು, ಕಾಣಿಕೆಯನ್ನು ಸಂಗ್ರಹಿಸುವುದಕ್ಕೆ ಬರುತ್ತಾರೆ. ಇವರು ಭಿಕ್ಷೆ ಬೇಡುವವರಲ್ಲ ಇವರನ್ನು 'ಕಾಣಿಕೆಯವರು' ಎಂದು ಸಹ ಕೆಲವು ಕಡೆ ಕರೆಯುತ್ತಾರೆ. ತಮ್ಮ ದೇವರಾದ ಜುಂಜಪ್ಪನ ಬಗ್ಗೆ ಹಲವು ರಾತ್ರಿಗಳ ಕಾಲ ಹಾಡುತ್ತಾರೆ. ಇಲ್ಲಿ ಮುಖ್ಯನಾದವನು ಗಣೆಯನ್ನು ಊದುತ್ತಾನೆ. ಮತ್ತೊಬ್ಬ ಆತನ ಜೊತೆ ಹಾಡುತ್ತಾನೆ. ಅನೇಕ ದುರಂತದ ಹಾದಿಯಲ್ಲಿ ಸಾಗುವ ಕತೆ ಕೊನೆಗೆ ಜುಂಜಪ್ಪನ ಅವತಾರ ಮಹಿಮೆಯಿಂದ ಕೊನೆಗೊಳ್ಳುತ್ತದೆ. ಜುಂಜಪ್ಪನ ತಮ್ಮಂದಿರು ಏಳು ಸಾವಿರ ದನವನ್ನು ಕಾಯುತ್ತಿದುದ್ದು, ಜುಂಜಪ್ಪನನ್ನು ಕೊಲ್ಲಲು ಅವನ ಸೋದರ ಮಾವಂದಿರಾದ ಕಂಬೇರುಗೊಲ್ಲರು ಪ್ರಯತ್ನಿಸಿದ ಬಗೆ ಅವತಾರದ ಮಹಿಮೆಯನ್ನು ಸಾರುತ್ತಾರೆ.

"ಸ್ವಾಮಿ ಜುಂಜಪ್ಪ ಹರಿಯೋ ಹಾವಿನ ಗಂಡ

ಉರಿಯೋ ಕಿಚ್ಚಿನ ಗಂಡ

ಅವರ ಹೊಲದಲ್ಲಿ ಮನೆಯಲ್ಲಿ । ಮಕ್ಕಳಲ್ಲಿ, ಮರಿಯಲ್ಲಿ

ಹೋತ್ತಾವು, ಬಂತ್ತಾವು, ಕರೀನಲ್ಲಿ, ದನೀನಲ್ಲಿ । ಹಾವು ಚೇಳು

ಹುಳ ಹುಪ್ಪಡೆಯಾಗಿ ಏನಾರ ಕಂಡೀಯಪ್ಪಾ

ನಿನ್ನ 'ಕಾಣಿಕೆ' ಆಗ್ಯಾದಪ್ಪ

ಕಾಪಾಡಪ್ಪ ಕಾಪಾಡು"[21]

ಎಂದು ಹಾಡುತ್ತಾ ಹೋಗುತ್ತಾರೆ. ಬೆಂಗಳೂರು, ತುಮಕೂರು, ಚಿತ್ರದುರ್ಗ ಹಾಗೂ ಮಂಡ್ಯ ಜಿಲ್ಲೆಯ ಕೆಲವು ಕಡೆ ವಾಸಿಸುತಾರೆ ಕಾಡುಗೊಲ್ಲರು.

## ಕಾಡುಗೊಲ್ಲರು

ಕಾಡುಗೊಲ್ಲರು ಒಂದು ಬುಡಕಟ್ಟು ಜನಾಂಗದವರು, ಜುಂಜಪ್ಪನ ಕಥೆ ಕನ್ನಡ ಜನಪದ ಕಾವ್ಯಗಳಲ್ಲಿ ಬಹಳ ಪ್ರಮುಖ ಪಾತ್ರವಹಿಸುತ್ತದೆ. ಮೂರು ತಲೆಮಾರಿನವರ ಕತೆಯಾದ ದೆಸೆಯಿಂದ ಮೂರು ನಾಲ್ಕು ರಾತ್ರಿ ಹಾಡುವ ಕತೆ ಇದು. ಇದೊಂದು ಪದ್ಯಕಾವ್ಯ. ಒಂದೊಂದು ಕಡೆ ಗದ್ಯ ರೂಪದಲ್ಲಿಯು ಹೇಳಿರುವುದನ್ನು ನೋಡಬಹುದು. ಗಣೆಯೆ ಇವರ ಸಂಗೀತ ವಾದ್ಯ ಜುಂಜಪ್ಪನ ಮಹಿಮೆಯನ್ನು ಈ ಕಾಡುಗೊಲ್ಲರು ಹಾಡುತ್ತಾರೆ.

### ಕಾಡುಗೊಲ್ಲ ಪದದ ಅರ್ಥ ಮತ್ತು ಉಗಮ

ಕಾಡುಗೊಲ್ಲ ಎಂದರೆ ಕಾಡಿನಲ್ಲಿ ದನಗಳನ್ನ ಕಾಯುವವನು ಎಂದರ್ಥ. ಕಾಡುಗೊಲ್ಲರನ್ನು ಅಡವಿಗೊಲ್ಲರು, ಕಲ್ಲಿಗೆಗೊಲ್ಲರು, ಕರಡಿಗೊಲ್ಲರು, ಕಳ್ಳಿಗೊಲ್ಲರು, ಹಟ್ಟಿಗೊಲ್ಲರು, ಕಳ್ಳಿಗೊಲ್ಲರು ಎಂಬ ಮುಂತಾದ ಹೆಸರುಗಳಿಂದ ಗೊಲ್ಲರನ್ನು ಕರೆಯುತ್ತಾರೆ. ಅಡವಿ ಎಂದರೆ ಕಾಡು ಅದಕ್ಕೆ ಇವರನ್ನು ಅಡವಿ ಗೊಲ್ಲರು ಎನ್ನುವರು. ಕಳ್ಳಿಗೊಲ್ಲರು ಎಂಬುವುದಕ್ಕೆ ಇವರು ಕಾಡಿನಲ್ಲಿ ಹಟ್ಟಿಯನ್ನು ಕಟ್ಟಿರುವುದರ ಸುತ್ತ ಕಳ್ಳಿಯನ್ನು ನೆಟ್ಟು ಕಳ್ಳಿಯ ಬೇಲಿಯನ್ನು ಹಾಕಿದ್ದರಿಂದ ಕಳ್ಳಿಗೊಲ್ಲರು ಅಥವಾ 'ಕಲ್ಲಿಗೊಲ್ಲರು' ಎಂದು ಹೆಸರು ಬಂದಿದೆ ಎಂದರೆ, ಇನ್ನು ಕೆಲವಾರು ವಿದ್ವಾಂಸರು ಇದು ಸರಿಯಾದುದಲ್ಲ, ಈ ಪದ ಇದರಿಂದ ಬಂದಿಲ್ಲ, ಎಂದು ಬೇರೆ ಕಾರಣವನ್ನು ಕೊಡುತ್ತಾರೆ. ಅವರು ದನಗಳನ್ನು ಮೇಯಿಸಲು ಬೇರೆ ಬೇರೆ ಸ್ಥಳಗಳಿಗೆ ಹೋಗಬೇಕಾಗಿರುವುದರಿಂದ ಅವರು ಕಲ್ಲಿಯಲ್ಲಿ ಪ್ರಮುಖ ಸಾಮಾನುಗಳನ್ನು ತುಂಬಿಕೊಂಡು ಹೋಗುತ್ತಿದ್ದರು. ಕಲ್ಲಿಯಿಂದ ಈ ಹೆಸರು ಬಂದಿದೆ' ಎಂದು ಜಿ. ಶಂ.ಪ ಅಭಿಪ್ರಾಯ ಪಟ್ಟಿದ್ದಾರೆ.

---

[21] ಡಾ॥ ಕಾಳೇಗೌಡ ನಾಗವಾರ, ಜನಪದ ಸಾಹಿತ್ಯ, ಪುಟಸಂಖ್ಯೆ 142

ಎಂದು ಶಂಕರ ನಾರಾಯಣರವರು ಹೇಳುತ್ತ ಆದರೆ "ಕಳ್ಳಿಗೊಲ್ಲರು ಎಂಬ ಪದಕ್ಕೆ ಕಾಡುಗೊಲ್ಲರ ಹಳ್ಳಿಗಳ ಸುತ್ತ ಕಳ್ಳಿಯನ್ನು ಬೆಳೆಸುವುದಕ್ಕಿಂತ ಹೆಚ್ಚಾಗಿ ಜಾಲಿ ಮುಳ್ಳು ಅಥವಾ ಬಾರೆ ಮುಳ್ಳು ಹಾಕಿ ಬೇಲಿ ಕಟ್ಟಿರುತ್ತಾರೆ. ಜಾಲಿ ಮುಳ್ಳನ್ನು ಜಾಲಿಕಳ್ಳಿ ಎಂದೂ, ಬಾರೆ ಮುಳ್ಳನ್ನು ಬಾರೆ ಕಳ್ಳಿ ಎಂದೂ ಕಾಡುಗೊಲ್ಲರು ಕರೆಯುತ್ತಾರೆ. ಕಾಡುಗೊಲ್ಲರು ತಮ್ಮ ಹಟ್ಟಿಯ ಸುತ್ತ ಹಾಕುವ ಬೇಲಿಗೆ ಕಳ್ಳಿಯನ್ನು ಉಪಯೋಗಿಸಿ ಉಳಿದೆಲ್ಲರಿಂದಲೂ ಪ್ರತ್ಯೇಕವಾಗಿರುವುದರಿಂದ, ಕಳ್ಳಿ ಹಾಕುವುದು ಅವರ ಸಂಸ್ಕೃತಿಯ ಒಂದು ಮುಖ್ಯವಾದ ಲಕ್ಷಣವಾದುದರಿಂದ ಅವರಿಗೆ ಕಳ್ಳಿ ಗೊಲ್ಲರು ಎಂದು ಹೆಸರಿದೆ"[22] ಎಂದು ಹೇಳಿರುವ ಹೇಳಿಕೆ ಸರಿಯಾದುದು ಎನಿಸುತ್ತದೆ. ಇದಲ್ಲದೆ. ಜುಂಜಪ್ಪನ ಕಾವ್ಯದಲ್ಲಿ ಸಿತ್ತರು ದೇವರು ಕಾಟುಮ ದೇವರು ತಮ್ಮ ಪೂಜಾರಿಗಳನ್ನಾಗಿ ಮಾಡಿಕೊಳ್ಳಲು ಕರೆ ತಂದ ಮಕ್ಕಳಾದ ಸಿಕ್ಕುಮುತ್ತಿ, ಸನ್ಮುತ್ತಿಯನ್ನು ಬಂಗಾರದ ಗೊಡಗಿಗೆ ಸುತ್ತು ಕಾರೇ ಮುಳ್ಳ ಕವಳೆ ಮುಳ್ಳು ಹಾಕಿ ಬೇಲಿ ತಿರುವಿ' ಇದನ್ನು ನೋಡಿದಾಗ ಶಂಕರನಾರಾಯಣ ಹೇಳಿಕೆ ಸರಿಯಾದುದು. ಇದರ ಆಧಾರದ ಮೇಲೆ ಈ ಕಳ್ಳಿ ಗೊಲ್ಲರು ಎಂಬ ಹೆಸರು ಬಂದಿರಬೇಕು. ಈ ಹೆಸರು ಅವರಿಗೆ ಸರಿಯಾದುದು. ಕಾಡುಗೊಲ್ಲರು ಊರಿನಿಂದ ಹೊರಗೆ ಪ್ರತ್ಯೇಕವಾದ ಹಟ್ಟಿಗಳನ್ನು ಕಟ್ಟಿಕೊಂಡು ಜೀವನ ನಡೆಸುವುದರಿಂದ ಇವರನ್ನು 'ಹಟ್ಟಿಗೊಲ್ಲರು' ಎಂದು ಕರೆಯುತ್ತಾರೆ. ಕಾಡುಗೊಲ್ಲರ ಒಂದು ಪಂಗಡ. ಕರಡಿಗೊಲ್ಲರು ಪಾವುಗಡ, ಕೂಡಿಗೆ ಮುಂತಾದ ಪ್ರದೇಶಗಳಲ್ಲಿ ಕಾಡುಗೊಲ್ಲರನ್ನ ಕರೆಡಿಗೊಲ್ಲರೆಂದು ಕರೆಯುವುದು ರೂಢಿಯಲ್ಲಿರುವುದನ್ನು ನೋಡಬಹುದಾಗಿದೆ. ಈ ಪ್ರದೇಶದ ಜನರಿಗೆ ಕಾಡುಗೊಲ್ಲರು. ಅಂದರೆ ಅವರಿಗೆ ಯಾರನ್ನು ಕುರಿತು ಹೇಳುತ್ತಿದ್ದಾರೆ ಎಂಬುದು ಅರ್ಥವಾಗುವುದಿಲ್ಲ. ಕರಡಿಗೊಲ್ಲರು ಎಂದರೆ ಮಾತ್ರ ಅವರಿಗೆ ಅರ್ಥವಾಗುತ್ತದೆ. ಕಾಡುಗೊಲ್ಲರ ಉಪಪಂಗಡಗಳಿಗೆ 'ಬೆಗಡು' ಎಂಬ ಹೆಸರಿದೆ. 'ಕಾಡುಗೊಲ್ಲರ ವೈಶಿಷ್ಟವಿರುವುದು ಅವರು ಊರಿನಲ್ಲಿ ವಾಸ ಮಾಡದೆ ಕಾಡುಗಳಲ್ಲಿ ವಾಸಮಾಡುವುದರಲ್ಲಿ. ಊರುಗಳ ಮುಖವನ್ನೆ ಕಾಣದ ಎಷ್ಟೋಜನ ಕಾಡುಗೊಲ್ಲರು ಇದ್ದಾರೆ. ಅವರ ಸಂಸ್ಕೃತಿ ರೂಪುಗೊಂಡಿರುವುದು ಕಾಡುಗಳಿಂದ, ಇದರಿಂದಾಗಿ ಅವರನ್ನ ಕಾಡುಗೊಲ್ಲರು ಎಂಬ ಹೆಸರಿನಿಂದ ಕರೆಯುವುದು ಸೂಕ್ತ"[23]ಎಂದಿದ್ದಾರೆ. ಆದರೆ ಇತ್ತೀಚಿನ ದಿನಗಳಲ್ಲಿ ನಾಗರೀಕತೆಯ ಪ್ರಭಾವದಿಂದ ಅವರೆಲ್ಲ ನಾಗರೀಕತೆಯನ್ನ ಅಳವಡಿಸಿಕೊಂಡು ಇವರು ಹೇಳಿದ ಮಟ್ಟದಲ್ಲಿ ಇಲ್ಲ – ಅಂದರೆ ಅವರ ಪಂಗಡವನ್ನು ಮಾತ್ರ ಸೂಚಿಸುವುದಕ್ಕೆ ಕಾಡುಗೊಲ್ಲರು ಎಂದು ಹೇಳಬಹುದೆ ಹೊರತು, ಕಾಡುಗಳಲ್ಲಿ ವಾಸ

---

22 ತೀನಂ ಶಂಕರ ನಾರಾಯಣ, ಕಾಡು ಗೊಲ್ಲರ ಸಂಪ್ರದಾಯ ಮತ್ತು ನಂಬಿಕೆಗಳು, ಪುಟಸಂಖ್ಯೆ 21.

23 ತೀನಂ ಶಂಕರ ನಾರಾಯಣ, ಕಾಡು ಗೊಲ್ಲರ ಸಂಪ್ರದಾಯ ಮತ್ತು ನಂಬಿಕೆಗಳು, ಪುಟಸಂಖ್ಯೆ 21.

ಮಾಡುವುದರಿಂದ ಬಂದಿದೆ ಎನ್ನುವುದು ಇತ್ತೀಚಿನ ದಿನಗಳಲ್ಲಿ ಹೆಚ್ಚು ಸೂಕ್ತವಲ್ಲ. ಎಂಬುದು ನನ್ನ ಅಭಿಪ್ರಾಯ.

**ಕಾಡುಗೊಲ್ಲರು ಮತ್ತು ಇತರೆ ಬಗೆಯ ಗೊಲ್ಲರು**

ಕಾಡುಗೊಲ್ಲರು ನಾವು ಕೃಷ್ಣನ ಯಾದವ ಕುಲದವರು ಎಂದು ಹೇಳಿಕೊಳ್ಳುತ್ತಾರೆ. ಶ್ರೀಕೃಷ್ಣ ಗೊಲ್ಲರ ಜೊತೆಯಲ್ಲಿ ಬೆಳೆದ ಮತ್ತು ಗೊಲ್ಲರ ಹೆಣ್ಣು ಮಕ್ಕಳ ಜೊತೆ ಇದ್ದನು ಎಂಬ ಕಾರಣಕ್ಕಾಗಿ ಕಾಡುಗೊಲ್ಲರಲ್ಲಿ ಅನೇಕಾರು ಕುಲಗಳಿವೆ. ಅವುಗಳಲ್ಲಿ ಊರುಗೊಲ್ಲರು, ಕೆಟ್ಟಹಟ್ಟಿ ಗೊಲ್ಲರು, ಮುದ್ದಿನಗೊಲ್ಲರು, ಪೆದ್ದೇಟುಗೊಲ್ಲರು, ಕಂಚಿಗೊಲ್ಲರು ಇತ್ಯಾದಿ. ಊರುಗೊಲ್ಲರ ಮಾತೃಭಾಷೆ ತೆಲಗು, ಇವರನ್ನು ಕರ್ನಾಟಕಕ್ಕಿಂತ ಆಂದ್ರ ಪ್ರದೇಶದಲ್ಲಿ ಹೆಚ್ಚಾಗಿ ಕಾಣಬಹುದಾಗಿದೆ. ಆದರೆ ಕಾಡುಗೊಲ್ಲರ ಮಾತೃಭಾಷೆ ಕನ್ನಡ. ಇವರು ಆಂದ್ರ ಪ್ರದೇಶದ ಕೆಲವು ಪ್ರದೇಶದಲ್ಲಿಯೂ ವಾಸ ಮಾಡುತ್ತಾರೆ. ಅಲ್ಲೂ ಇವರ ಮಾತೃ ಭಾಷೆ ಕನ್ನಡ, ಕಾಡುಗೊಲ್ಲರು ಊರಿನವರ ಸಂಪರ್ಕ ಹೆಚ್ಚಾಗಿ ಇಲ್ಲದಿರುವುದರಿಂದ ಪ್ರತ್ಯೇಕತೆಯನ್ನು ಉಳಿಸಿಕೊಂಡಿದ್ದಾರೆ. ಊರು ಗೊಲ್ಲರು ಊರಿನಲ್ಲಿ ಇತರ ಜಾತಿಯವರ ಜೊತೆಯಲ್ಲಿ ಬೆರೆಯುವುದರಿಂದ ಕಾಡುಗೊಲ್ಲರನ್ನು ಅನಾಗರಿಕರು ಎಂದು ಹೇಳುತ್ತಾರೆ. ಕಾಡುಗೊಲ್ಲರು ಇವರನ್ನು ಊರಿನ ಜನರ ಜೊತೆ ಸೇರಿ ಕುಡಿಯುವುದು, ಸೇದುವುದು ಮುಂತಾದ ಚಟಗಳಿಗೆ ಬಲಿಯಾದವರು ಎಂಬ ತಿರಸ್ಕಾರ ಭಾವನೆ ಇದೆ. ಊರಗೊಲ್ಲರು ಸರ್ಕಾರದ ಸಹಕಾರವನ್ನು ಪಡೆದುಕೊಂಡು ಸಾಮಾಜಿಕವಾಗಿ, ಆರ್ಥಿಕವಾಗಿ ಮುಂದುವರಿದಿರುವುದನ್ನು ಕಾಣುತ್ತವೆ. ಕಾಡುಗೊಲ್ಲರು ಇದರಿಂದ ವಂಚಿತರಾಗಿದ್ದಾರೆ. ಕಾಡುಗೊಲ್ಲರಲ್ಲಿ ಬೇರೆ ಜಾತಿಯ ಹೆಣ್ಣನ್ನು ಮದುವೆಯಾದರೆ ಅಥವಾ ತಮ್ಮ ಬುಡಕಟ್ಟು ವಿಧವೆಯೊಂದಿಗೆ ಲೈಂಗಿಕ ಸಂಬಂಧವನ್ನು ಇಟ್ಟುಕೊಂಡರೆ ಅವರನ್ನು ಕುಲದಿಂದ ತೆಗೆದು ಹಾಕಲಾಗುವುದು. ಹಟ್ಟಿಯಿಂದ ತೆಗೆದವರು ಕಟ್ಟೆಯಿಂದ ಉಚ್ಛಾಟಿತರಾಗುತ್ತಾರೆ. ಆದ್ದರಿಂದ ಇವರನ್ನು ಕೆಟ್ಟಹಟ್ಟಿಗೊಲ್ಲರು ಎಂಬ ಹೆಸರಿಂದ ಕರೆಯುತ್ತಾರೆ. ಮದ್ದಿನಗೊಲ್ಲರು ಕಾಡಿನ ಗಿಡ ಮೂಲಿಕೆಗಳಿಂದ ಔಷಧಿಯನ್ನು ಮಾಡಿ ಕೊಡುವುದರಿಂದ ಇವರಿಗೆ ಈ ಹೆಸರು ಬಂದಿದೆ. ಇನ್ನು ಪೆದ್ದೇಟುಗೊಲ್ಲರು ಆಂದ್ರಪ್ರದೇಶದವರು. ಕಂಚಿಗೊಲ್ಲರು ಕರ್ನಾಟಕದವರು. ಇವರಿಬ್ಬರು ಮಾಟ ಮಾಡುವುದರಲ್ಲಿ ಪ್ರಸಿದ್ದರು ಅದುದ್ದರಿಂದ ಕಾಡುಗೊಲ್ಲರಿಗೂ ಇವರಿಗೂ ಸಂಬಂಧವಿಲ್ಲ.

**ಕಾಡು ಗೊಲ್ಲರು ಮತ್ತೆ ಇತರ ಜಾತಿಯ ಸಂಬಂಧ**

ಕಾಡುಗೊಲ್ಲರು ವಿಶೇಷವಾಗಿ ಬೇಡರು, ಕುರುಬರು ಮತ್ತು ಕಂಚಿಡಿಗ ಒಕ್ಕಲಿಗರೊಡನೆ ಸಂಪರ್ಕವಿರುವುದನ್ನು ಕಾಣುತ್ತವೆ. ಬೇಡರು ಬೇಟೆಯಾಡುತ್ತಾ ಕಾಡಿನಲ್ಲಿ ಹೊಡಾಡುವುದು, ವಾಸಮಾಡುವುದು ಮತ್ತು ಕಾಡುಗೊಲ್ಲರು ಕಾಡುಗಳಲ್ಲಿಯೆ ವಾಸ ಮಾಡುವುದರಿಂದ ಇವರ ಸಂಪರ್ಕ ಹೆಚ್ಚಾಗಿರುತ್ತದೆ. ಹಾಗೆಯೇ ಜುಂಜಪ್ಪನ ಕತೆಯಲ್ಲಿ ನ್ಯಾಸಬೇಡರ ಹೊಲದಲ್ಲಿ ಬಡಮೈಲ ಮೇಯಲು ಬಂದದ್ದು, ಅದನ್ನು ಕಂಬೇರಗೊಲ್ಲರ ಹೇಳಿಕೆಯ ಮೇಲೆ ಬಡಮೈಲನನ್ನು ಹಿಡಿದುದ್ದು, ಜುಂಜಪ್ಪ ಬೇಡರ ಹೊಲದಲ್ಲಿ ಇದ್ದಂತಹದು ಇದನ್ನೆಲ್ಲಾ ನೋಡಿದಾಗ, ಬೇಡರ ಜೊತೆಗೆ ಕಾಡುಗೊಲ್ಲರ ಸಂಬಂಧವಿತ್ತು ಎನಿಸುತ್ತದೆ.

ಹಾಗೆಯೇ ಕುರುಬರ ಜೊತೆಯಲ್ಲಿಯು ಸಂಬಂಧವಿತ್ತು. ಕಾಡು ಗೊಲ್ಲರು ಸಾಕುವ ಕುರಿಯ ತುಪ್ಪಟವು ಕುರುಬರಿಗೆ ಬೇಕಾಗಿರುವುದರಿಂದ ಇವರು ಕಾಡುಗೊಲ್ಲರ ಜೊತೆಯಲ್ಲಿ ಹೆಚ್ಚಿನ ಸಂಪರ್ಕವನ್ನು ಹೊಂದಿದ್ದರು ಹಾಗೆಯೇ ಒಕ್ಕಲಿಗರ ಜೊತೆಯಲ್ಲಿಯು ಸಹ ಸಂಬಂಧವನ್ನು ಕಾಡುಗೊಲ್ಲರು ಹೊಂದಿದ್ದರು. ಎತ್ತುಗಳು, ಹಸುಗಳು, ಹೋರಿಗಳನ್ನ ಹಿಂದೆ ಕಾಡುಗೊಲ್ಲರು ಹೆಚ್ಚಾಗಿ ಸಾಕುತ್ತಿದ್ದರು. ಇವು ವ್ಯವಸಾಯವೇ ಪ್ರಧಾನವಾಗಿದ್ದ ಒಕ್ಕಲಿಗರಿಗೆ ಬೇಕಾಗಿತ್ತು. ಅದುದ್ದರಿಂದ ಅವುಗಳನ್ನು ಕೊಳ್ಳುವುದು ಮಾಡುತ್ತಿದ್ದುದರಿಂದ ಇವರ ಸಂಪರ್ಕ ಹೆಚ್ಚಾಗಿತ್ತು. ಒಕ್ಕಲಿಗರು ತಮ್ಮ ದನಕರುಗಳನ್ನ ಸಾಕುವ ಜವಾಬ್ದಾರಿಯನ್ನ ಅದರಲ್ಲೂ ವಿಶೇಷವಾಗಿ ಬೇಸಿಗೆಯ ಸಮಯದಲ್ಲಿ ಹೆಚ್ಚಾಗಿ ಇವರಿಗೆ ವಹಿಸುತ್ತಿದ್ದರು. ಒಕ್ಕಲಿಗರು ಸಂಕ್ರಾಂತಿ ಸಮಯದಲ್ಲಿ 'ಕಾಟಮ್ಮ' ಎಂಬ ದೇವತೆಯನ್ನು ಪೂಜಿಸಲು ಕಾಡುಗೊಲ್ಲ ಪೂಜಾರಿಗಳನ್ನ ಕರೆಸುತ್ತಿದ್ದರು. ಜುಂಜಪ್ಪನ ಕಾವ್ಯದಲ್ಲಿ ಜುಂಜಪ್ಪನ ತಂದೆ ಕೆಂಗುರಿ ಮಲ್ಲಪ್ಪನಿಗೆ ಆಶ್ರಯ ಕೊಟ್ಟ ಹೊನ್ನಹಟ್ಟಿ ಅಲೇಗೌಡ ಒಕ್ಕಲಿಗನಾದುದ್ದರಿಂದ, ಆದರೆ ಬೇಡರ ಜೊತೆಯಲ್ಲಿಯಾಗಲಿ, ಒಕ್ಕಲಿಗರ ಜೊತೆಯಲಾಗಲಿ, ಕುರುಬರ ಜೊತೆಯಲಾಗಲಿ ವಿವಾಹ ಸಂಬಂಧ ಹೊಂದಿಲ್ಲ ದೇಜೇಗೌ ರವರು ಹೇಳಿದ್ದನ್ನು ನೋಡಿದರೆ ಮೂಲದಲ್ಲಿ ಈ ಮೂರು ಜಾತಿಯವರು ಒಂದೇ ಜನಾಂಗದವರು ಇರಬೇಕು. ಆ ಮೇಲೆ ವೃತ್ತಿಯ ಆಧಾರದ ಮೇಲೆ ಇವರು ಬೇರೆ ಬೇರೆಯಾಗಿರಬೇಕು. ಅವರುಗಳ ನಡೆನುಡಿಯಲ್ಲಿ ಯಾವುದೇ ಬೇಧವಿರುವುದನ್ನು ಕಾಣುವುದಿಲ್ಲ. ಒಂದೇ ಕೇರಿಯಲ್ಲಿ ಅಣ್ಣ ತಮ್ಮಂದಿರ ರೀತಿಯಲ್ಲಿ ವಾಸ ಮಾಡುತ್ತಾರೆ. ಇವರ ನಡುವೆ ವೈವಾಹಿಕ ಸಂಬಂಧವು ಇಲ್ಲದಿರುವುದನ್ನು ಕಾಣಬಹುದು. ಈ ಮೂರು ಜಾತಿಯಲ್ಲಿ ಕೆಲವು ಸಂಪ್ರದಾಯ ಸಾಮ್ಯತೆ ಇದೆ. ಮದುವೆ ಪದ್ಧತಿ, ಹಬ್ಬ ಅಚರಣೆಗಳನ್ನು ತುಂಬ ವರ್ಷಗಳ ಕಾಲ

ಕಾಡುಗೊಲ್ಲರು ಕಾಡುಗಳಲ್ಲೆ ಉಳಿದ ಕಾರಣ ಬುಡಕಟ್ಟಿನವರ ರೀತಿಯಲ್ಲಿ ಅವರು ನಂಬಿಕೆ ಸಂಪ್ರದಾಯಗಳನ್ನು ಉಳಿಸಿಕೊಂಡು ಬಂದಿದ್ದರಿಂದ ಈ ದಿನಗಳಲ್ಲಿಯು ಸಹ ಅವರ ವಿಶೇಷವಾಗಿ ಪ್ರತ್ಯಾಕವಾಗಿ ಉಳಿದಿದ್ದಾರೆ.

**ಕಾಡುಗೊಲ್ಲರ ನೆಲೆಗಳು**

ಕಾಡುಗೊಲ್ಲರು ಕರ್ನಾಟಕ ಮತ್ತು ಆಂದ್ರ ಪ್ರದೇಶದ ಕೆಲವು ಭಾಗಗಳಲ್ಲಿ ಕಂಡು ಬರುತ್ತಾರೆ. ಕರ್ನಾಟಕದ ತುಮಕೂರು, ಚಿತ್ರದುರ್ಗ, ಬಳ್ಳಾರಿ, ಹಾಸನ, ಬೆಂಗಳೂರು ಮತ್ತು ಮಂಡ್ಯ ಜಿಲ್ಲೆಯ ಕೆಲವು ಭಾಗಗಳಲ್ಲಿ ಇವರು ಕಂಡು ಬರುತ್ತಾರೆ. ಮಂಡ್ಯದ ಮದ್ದೂರು ತಾಲ್ಲೂಕಿನಲ್ಲಿ, ಬೆಂಗಳೂರಿನ ಮಾಗಡಿ, ಕನಕಪುರ ಮತ್ತು ದೊಡ್ಡ ಬಳ್ಳಾಪುರ ತಾಲ್ಲೂಕಿನಲ್ಲಿ ಹಾಸನದ ಅರಸಿಕೆರೆ ತಾಲ್ಲೂಕಿನಲ್ಲಿಯು ವಾಸ ಮಾಡುತ್ತಾರೆ. ಆಂದ್ರಪ್ರದೇಶದ ಅನಂತಪುರ ಜಿಲ್ಲೆಯ ಮಡಕಸಿರಾ, ಕಲ್ಯಾಣದುರ್ಗ ಮತ್ತು ರಾಯದುರ್ಗ ತಾಲ್ಲೂಕುಗಳಲ್ಲಿದ್ದಾರೆ. ಕರ್ನಾಟಕದ ಹಿರಿಯೂರು, ಚಳ್ಳಿಕೆರೆ ಮತ್ತು ಸಿರಾ ತಾಲ್ಲೂಕುಗಳನ್ನು ಕಾಡುಗೊಲ್ಲರ ಸಾಂಸ್ಕೃತಿಕ ಕೇಂದ್ರಗಳು ಎಂದು ಕರೆಯುತ್ತಾರೆ. ಇವರ ಪ್ರಸಿದ್ಧ ದೇವತೆ ಜುಂಜಪ್ಪನ ದೇವಸ್ಥಾನ ತುಮಕೂರು ಜಿಲ್ಲೆಯ ಹಾಗಲವಾಡಿಯಲ್ಲಿದೆ. ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಯಲ್ಲಿ ಇವರ ಸಂಖ್ಯೆ ಹೆಚ್ಚಾಗಿದೆ. ಇವರ ಜನಸಂಖ್ಯೆ ಇಷ್ಟೆ ಎಂದು ನಿಖರವಾಗಿ ಹೇಳುವುದಕ್ಕೆ ಆಗುವುದಿಲ್ಲ.

**ಕಾಡುಗೊಲ್ಲರ ಉಪವಿಭಾಗಗಳು**

ಕಾಡುಗೊಲ್ಲರ ಉಪವಿಭಾಗಗಳನ್ನು ಬೆಡಗು ಎಂದು ಕರೆಯುತ್ತಾರೆ. ಇದನ್ನು ಜುಂಜಪ್ಪನ ಕಾವ್ಯದಲ್ಲಿ ಬ್ರಾಹ್ಮಣ ಕಾಟುಮಲಿಂಗ ಸಿತ್ರ ದೇವರುಗಳು ಯಾವ ಕುಲ ಯಾವ ಬೆಡಗು ಎಂದು ಕೇಳಿರುವುದರಿಂದ ಇವರ ಉಪವಿಭಾಗಕ್ಕೆ ಬೆಡಗು ಎಂದು ಬಂದಿರಬೇಕು. ಚಿತ್ತಮುಕ್ತಿ ಕುಲದವರು ಚಂದಮುತ್ತಿ ಕುಲದವರು, ರಾಮೇಗೌಡನ ಕುಲದವರು ಎಂಬ ಮೂರು ಮುಖ್ಯ ವಿಭಾಗಗಲಿವೆ. ಈ ಒಂದೊಂದು ಕುಲದಲ್ಲಿಯೂ ಕೆಲವು ಬೆಡಗುಗಳಿವೆ. ಈ ಬೆಡಗಿನಲ್ಲಿಯು ವರ್ಗಗಳಿವೆ.

**ಚಿತ್ತಮುತ್ತಿ ಕುಲದವರು** :– ಕರಡಿಗೊಲ್ಲರು, ಮಾರನವರಗೊಲ್ಲರು

**ಚಂದ್ರ ಮುತ್ತಿಕುಲದವರು** :– ಅಜ್ಜಿಯವರಗೊಲ್ಲರು, ಸನ್ನರಗೊಲ್ಲರು, ಸೋಮನವರಗೊಲ್ಲರು, ಬೊಮ್ಮನವರಗೊಲ್ಲರು, ಕೋಣನವರಗೊಲ್ಲರು, ಪೋಲನವರಗೊಲ್ಲರು, ಎಗಡಿನವರಗೊಲ್ಲರು, ಅರಿಸಿನಕಲ್ಲಿಗೊಲ್ಲರು,

**ರಾಮೇಗೌಡನ ಕುಲದವರು:–** ಅರೇನವರಗೊಲ್ಲರು, ಮೇರೆನವರಗೊಲ್ಲರು, ಕಂಬಿಯವರ ಗೊಲ್ಲರು, ಕಹಳೆಯವರಗೊಲ್ಲರು, ಒನಕೆಯವರಗೊಲ್ಲರು, ಮಾಸಿನವರಗೊಲ್ಲರು, ಬೇರವರಗೊಲ್ಲರು, ಬೆಳ್ಯೋರಗೊಲ್ಲರು, ಬೆಳ್ಳೂರವರು.

**ಕಾಡುಗೊಲ್ಲರ ಸಾಮಾಜಿಕ ಸಂಘಟನೆ**

ಕಾಡುಗೊಲ್ಲರು ಊರಿನಿಂದ ಹೊರಗೆ ಕಾಡುಗಳಲ್ಲಿ ಹಟ್ಟಿಗಳನ್ನ ಕಟ್ಟಿಕೊಂಡು ವಾಸ ಮಾಡುತ್ತಾರೆ. ಗೊಲ್ಲರ ಹಟ್ಟಿಗಳು ಊರಿನಿಂದ ದೂರದಲ್ಲಿರುತ್ತವೆ. ಆದರೆ ಒಂದು ಹಟ್ಟಿಯಿಂದ ಇನ್ನೊಂದು ಹಟ್ಟಿಗಳಿಗೆ ಹೆಚ್ಚಿಗೆ ಅಂತರವಿರುವುದಿಲ್ಲ. ಸಾಮಾನ್ಯವಾಗಿ ಒಂದು ಕಿಲೋ ಮೀಟರ್ ಅಂತರದಲ್ಲಿ ಮಾತ್ರವಿರುತ್ತದೆ. ಕೆಲವು ಊರುಗಳಲ್ಲಿ ರಸ್ತೆಯ ಒಂದು ಕಡೆ ಊರು ಇನ್ನೊಂದು ಕಡೆ ಹುಟ್ಟಿಗಳು ಇರುತ್ತವೆ ಇಂತಹ ಕಡೆಗಳಲ್ಲಿ ಕಾಡುಗೊಲ್ಲರ ಮೇಲೆ ನಾಗರೀಕತೆಯ ಪ್ರಭಾವ ಉಂಟಾಗಿದೆ. ಆದರೆ ಊರುಗಳಿಂದ ದೂರವಾಗಿರುವ ಗೊಲ್ಲರ ಹಟ್ಟಿಗಳು ಹೆಚ್ಚಿನ ಸಂಖ್ಯೆಯಲ್ಲಿ ಇವೆ. ಇವು ನಾಗರೀಕತೆಯ ಹೆಚ್ಚು ಪ್ರಭಾವಕ್ಕೆ ಒಳಗಾಗಿಲ್ಲ. ಹಟ್ಟಿಗಳಲ್ಲಿ ಕೆಲವು ಕಡೆ ಹೆಚ್ಚು ಮನೆಗಳಿದ್ದರೆ ಕೆಲವು ಕಡೆ ಕಡಿಮೆ ಮನೆಗಳಿವೆ ಇವರುಗಳು ತಮ್ಮ ಹಟ್ಟಿಯ ಸುತ್ತಜಾಲಿ ಮುಳ್ಳು ಬಾರೆ ಮುಳ್ಳು ಅಥವಾ ಸುತ್ತಮುತ್ತಾ ಹೆಚ್ಚಾಗಿ ಸಿಗುವ ಮುಳ್ಳಗಳನ್ನ ಉಪಯೋಗಿಸಿ ಬಳಸಿ ಬೇಲಿಯ ಹಾಕುತ್ತಾರೆ. ಈ ಮುಳ್ಳನ್ನು 'ಕಳ್ಳೆ' ಎನ್ನುತ್ತಾರೆ. ಈ ಬೇಲಿ, ಗೊಲ್ಲರ ಬದುಕಿನಲ್ಲಿ ಬಹಳ ಪ್ರಮುಖವಾದ ಪಾತ್ರವಹಿಸುತ್ತದೆ. ಮಣ್ಣನು ಹಟ್ಟಿಯ ಸುತ್ತಾ ಎತ್ತರವಾಗಿ ಹಾಕಿ ಅಲ್ಲಿ ಮುಳ್ಳನ್ನ ನೆಡುತ್ತಾರೆ. ಇದು ಎತ್ತರಕ್ಕೆ ಇರುವುದರಿಂದ ಅಲ್ಲ ಯಾವುದೇ ಕಾಡು ಪ್ರಾಣಿ ಬರುವುದಿಲ್ಲ. ಇವರು ಓಡಾಡಲು ಎರಡು ಕಡೆ ಹೊಳೆ ಬಾಗಿಲು ಎಂದು ದಾರಿ ಬಿಟ್ಟು ಕೊಂಡಿರುತ್ತಾರೆ. ಕಾಡುಗೊಲ್ಲರು ಹೆಚ್ಚಾಗಿ ಗುಡಿಸಿಲಿನಲ್ಲಿ ವಾಸಮಾಡುತ್ತಾರೆ. ಇದಕ್ಕೆ ಅನೇಕ ರೀತಿಯ ಹುಲ್ಲಿನ ಹೊದಿಕೆ ಹೊದಿಸುತ್ತಿದ್ದರು. ಇತ್ತೀಚೆಗೆ ಮಾತ್ರ ಕೆಲವು ಕಡೆ ಹಂಚಿನ ಮನೆಗಳನ್ನ ಕಾಣಬಹುದು ಒಟ್ಟಿನಲ್ಲಿ ಇವರ ಹಟ್ಟಿಗಳು ಅವ್ಯವಸ್ಥಿತವಾಗಿದ್ದರೂ, ತೃಪ್ತಿಯ ಜೀವನವನ್ನು ಸಂಪ್ರದಾಯಗಳನ್ನು ಉಳಿಸಿಕೊಂಡು ಬದುಕುತ್ತಾರೆ.

ಹಟ್ಟಿಗಳ ಮಧ್ಯ ದೇವಸ್ಥಾನವಿರುತ್ತದೆ. ಈ ದೇವಸ್ಥಾನವನ್ನು ಬಿದುರಿನಿಂದ ಮಾಡಿ ಅದಕ್ಕೆ ಹುಲ್ಲಿನ ಹೊದಿಕೆಯನ್ನು ಹೊಂದಿಸಿರುತ್ತಾರೆ. ದೇವಸ್ಥಾನ ಗೋಳಾಕೃತಿಯಲ್ಲಿರುತ್ತದೆ. ಬಾಗಿಲು ಚಿಕ್ಕದಾಗಿದ್ದು ಪೂರ್ವಭಿಮುಖವಾಗಿರುತ್ತದೆ. ದೇವರನ್ನು ಬಿಟ್ಟರೆ ಪೂಜಾರಿ ಮಾತ್ರ ನಿಂತುಕೊಂಡು ಪೂಜೆ ಮಾಡುವಷ್ಟು ಮಾತ್ರ ಜಾಗವಿರುತ್ತದೆ. ಕೆಲವು ಕಡೆ ಮಾತ್ರ ಸ್ವಲ್ಪ ದೊಡ್ಡದಾಗಿರುತ್ತವೆ. ಈ ದೇವಸ್ಥಾನಗಳನ್ನು 'ಗುಬ್ಬ' ಎಂದು ಕರೆಯುತ್ತಾರೆ. ಇದರ ಸುತ್ತಕಳ್ಳಿ

ಬೇಲಿಯನ್ನು ಹಾಕಿರುತ್ತಾರೆ. ಕೆಲವು ಕಡೆ ಇದಕ್ಕೆ ಬದಲಾಗಿ ಹಾಸುಕಲ್ಲುಗಳನ್ನ ಗೊತ್ತಾಗಿ ನೆಟ್ಟು ಕಾಂಪೌಂಡ್ ಮಾಡಿರುತ್ತಾರೆ. ಒಂದು ಕಡೆ ಮಾತ್ರ ಬಾಗಿಲನ್ನು ಬಿಟ್ಟಿರುತ್ತಾರೆ. ಇದನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ವರ್ಗಾಹಿಸಬಹುದಂತೆ, ಕೆಲವು ಕಡೆ ನಾಗರೀಕತೆಯ ಪ್ರಭಾವಕ್ಕೆ ಒಳಗಾಗಿ ದೇವಸ್ಥಾನಗಳನ್ನು ಹಂಚು ಉಪಯೋಗಿಸಿಕಟ್ಟಿದ್ದಾರೆ. ಇನ್ನು ಕೆಲವು ಕಡೆ ತಾರಸಿಯನ್ನು ಹಾಕಿ ಒಳಗಡೆ ಗುಬ್ಬವನ್ನು ಇಟ್ಟುಕೊಂಡಿದ್ದಾರೆ. ದೇವರ ವಡವೆಗಳನ್ನು ರಕ್ಷಿಸಲು ಅಥವಾ ಬೆಂಕಿಗೆ ಅಹುತಿಯಾಗುವುದನ್ನು ತಪ್ಪಿಸಲು ಈ ರೀತಿ ಕಟ್ಟುತ್ತಿದ್ದಾರೆ. ಹೀಗೆಯೆ ತಾರಸಿ ಹಾಕುವುದಕ್ಕೆ ಕಾರಣ ಇತರರಂತೆ ನಾವು ಇರಬೇಕು ಎಂಬ ಆಸೆಯಿಂದ. ಇವರ ದೇವಸ್ಥಾನದ ಕಳ್ಳಿ ಬೇಲೆಯ ಒಳಗೆ ಬೇವಿನ ಮರ, ತಗ್ಗಲಿಮರ ಮತ್ತು ದೂಪದ ಮರ ಮೂರು ಮರಗಳಿರುತ್ತವೆ. ಕೆಲವು ಕಡೆ ಇವುಗಳಲ್ಲಿ ಒಂದು ಅಥವಾ ಎರಡು ಮರಗಳಿರುವುದು ಕಂಡು ಬರುತ್ತದೆ. ಕೆಲವು ಕಡೆ ದೇವಸ್ಥಾನದ ಬಾಗಿಲಿಗೆ ತಗಡನ್ನು ಬಡಿದಿರುತ್ತಾರೆ. ಅವುಗಳಲ್ಲಿ ಜುಂಜಪ್ಪನ ಪುರಾಣದ ಬಡಮ್ಮೈಲ ಮತ್ತು ಎತ್ತಯ್ಯನ ಪುರಾಣದಲ್ಲಿ ಬರುವ ಸೀಳುತಲೆ ಚಿಕ್ಕರಂಭೆ ಎಂಬ ಹಸು ಮತ್ತು ಅದರ ಹಾಲನ್ನು ಕುಡಿಯುವ ಕರುವಿನ ಚಿತ್ರ ವಿದ್ದು, ಇವೆರಡು ಕಾಡುಗೊಲ್ಲರಿಗೆ ಪವಿತ್ರವಾದವು. ಒಂದೊಂದು ಹಟ್ಟಿಯಲ್ಲಿ ಒಂದು ಗುಬ್ಬವಿರಬಹುದು ಅಥವಾ ಒಂದಕ್ಕಿಂತ ಹೆಚ್ಚಿಗೆಯು ಇರುತ್ತವೆ.

ಕಾಡುಗೊಲ್ಲರು ತಮ್ಮ ಹಟ್ಟಿಗಳಿಗೆ ಹರಿಜನರನ್ನು ಸೇರಿಸುವುದಿಲ್ಲ. ಆದರೆ ಇತ್ತೀಚೆಗೆ ಈ ನಿಯಮ ಸಡಿಲಿಕೆಯನ್ನು ಕಂಡಿದೆ. ಸ್ವಾತಂತ್ರದ ನಂತರ ಈ ಹಟ್ಟಿಗಳಿಗೆ ಹರಿಜನ ನುಗ್ಗಿಸುವ ಪ್ರಯತ್ನ ನಡೆದಾಗ ಇವರು ವಿರೋಧಿಸಿದರೂ ತಡೆಯಲು ಸಾಧ್ಯವಾಗದೆ ಹೋದಾಗ, ಇವರು ಗುಬ್ಬವನ್ನು ಕಿತ್ತು ಕೊಂಡು ಹೋಗಿ ಕಾಡಿನಲ್ಲಿ ಅವಿತಿಟ್ಟು ಆಮೇಲೆ ಅದನ್ನು ಶುದ್ಧಿ ಮಾಡಿ ತಂದಿಡುತ್ತಿದ್ದರು. ಹೀಗಲು ಸಹ ಕಾಡುಗೊಲ್ಲರು ಹಂದಿ ಮತ್ತು ಕೋಳಿಗಳನ್ನು ಕೂಡಿಸುವುದಿಲ್ಲ. ಹಾಗೆಯೇ ಒಂದೊಂದು ಕಾಡುಗೊಲ್ಲರ ಹಟ್ಟಿಯ ಒಳಗೆ ಚಪ್ಪಲಿಯನ್ನು ಮೆಟ್ಟಿಕೊಂಡು ಹೋಗುವಾಗಿಲ್ಲ. ಅವುಗಳನ್ನು ಕಳ್ಳಿ ಬೇಲಿಯಾಚೆ ಬಿಟ್ಟು ಹೋಗಬೇಕು.

ಹಲವಾರು ಹಟ್ಟಿಗಳು ಸೇರಿ ಒಂದು 'ಕಣತಿ' ಹಲವಾರು ಕಣತಿಗಳು ಸೇರಿ 'ಅಂಬು' ಅನೇಕ ಅಂಬುಗಳು ಸೇರಿ 'ಗುಡಿಕಟ್ಟು' ಕೆಲವು ಗುಡಿಕಟ್ಟುಗಳು ಸೇರಿ ಒಂದು 'ಕಟ್ಟುಮನೆಯಾಗಿದೆ. ಕಟ್ಟಿಮನೆಗಳನ್ನು ನ್ಯಾಯ ತೀರ್ಮಾನ ಮಾಡುವ ಕೇಂದ್ರಗಳನ್ನಾಗಿ ಮಾಡಿಕೊಂಡಿದ್ದಾರೆ. ಇದಕ್ಕೆ ಅವರು ಗೌರವವನ್ನ ಕೊಡುತ್ತಾರೆ. ಇತ್ತೀಚೆಗೆ ಕಟ್ಟೆ ಮನೆಯ ನ್ಯಾಯ ತೀರ್ಮಾನಕ್ಕೆ ಮೊದಲ ಗೌರವಸಿಗುತ್ತಿಲ್ಲ. ಕೋರ್ಟುಗಳಿಗೆ ಹೋಗುವುದು, ಹೆಚ್ಚಾಗಿದೆ. ಆದರೂ

ಇಂದಿಗೂ ಕಟ್ಟೆ ಮನೆಗಳಲ್ಲಿ ಜಗಳಗಳಿಗೆ ನ್ಯಾಯ ತೀರ್ಮಾನ ಮಾಡಿಕೊಳ್ಳುವ ಜನರು ಇದ್ದಾರೆ. ಇವರಲ್ಲಿ ದೇವರ ಪೂಜೆ ಮಾಡುವ ಪೂಜಾರಿ ಬೇರೆ, ಸತ್ತವರಿಗೆ ಕರ್ಮಮಾಡುವ ಪೂಜಾರಿಯನ್ನು ಅಮವಾಸೆ ಪೂಜಾರಿ ಎನ್ನುತ್ತಾರೆ.

**ಕಾಡುಗೊಲ್ಲರ ಧಾರ್ಮಿಕ ಬದುಕು.**

ಕಾಡುಗೊಲ್ಲರ ಪ್ರಮುಖ ದೇವರುಗಳು ಕಾಟುಮದೇವರು, ಚಿತ್ರದೇವರು. ಪಾತೇದೇವರು ಕೇತೆದೇವರು, ನರಸಿಂಹ, ತಿಮ್ಮಪ್ಪ, ರಂಗಪ್ಪ, ಜುಂಜಪ್ಪ, ಎತ್ತಪ್ಪ ಗೌರಸಂದ್ರದ ಮಾರಕ್ಕ, ಬೇವಿನಹಳ್ಳಿ ಕರಿಯಮ್ಮ, ಕರೇ ಓಬೇನಹಳ್ಳಿ ಮಾರಮ್ಮ, ಗೊಲ್ಲಹಳ್ಳಿಯಮ್ಮ ಈ ಹೆಣ್ಣು ದೇವತೆಯರು ಜುಂಜಪ್ಪ ಎತ್ತಪ್ಪನಿಗೆ ತಂಗಿಯವರಂತೆ ಒಂದೊಂದು ಹೆಸರಿನಿಂದ ಒಂದೊಂದು ಕಡೆಗಳಲ್ಲಿ ಭೂತಪ್ಪನನ್ನು ಪೂಜೆ ಮಾಡುತ್ತಾರೆ. ಪುರಲಹಳ್ಳಿ ಭೂತಪ್ಪ ಇವುಗಳಲ್ಲೆಲ್ಲಾ ಹೆಚ್ಚು ಪ್ರಸಿದ್ದವಾದ ದೇವರು ಇವುಗಳಲ್ಲದೆ. ಕೆಲವಾರು ಚಿಕ್ಕ ಪುಟ್ಟ ದೇವತೆಗಳನ್ನು ಪೂಜಿಸುತ್ತಾರೆ. ಕಾಡುಗೊಲ್ಲರಲ್ಲಿ ಒಬ್ಬ ಪೂಜಾರಿ ಉನ್ನತ ಮಟ್ಟದ ವ್ಯಕ್ತಿಯಾಗಿದ್ದರೆ ಅವನ ಹೆಸರಿನಲಿ ಒಂದು ಕತ್ತಿಯನ್ನು ಮಾಡಿಸಿ ಆ ಕತ್ತಿಯನ್ನು ದೇವರೆಂದು ಪೂಜಿಸುತ್ತಾರೆ. ಇವರು ಸಹ ಸತ್ತ ವ್ಯಕ್ತಿಗಳ ಸಮಾಧಿಗೆ ಪೂಜೆಯನ್ನು ಮಾಡುತ್ತಾರೆ. ಇಲ್ಲಿ ಪೂಜಾರಿಯನ್ನು ಮಾತ್ರವಲ್ಲದೆ, ಗೊಲ್ಲರಲ್ಲಿ ಶೌರ್ಯಸಾಹಸದಿಂದ ಸತ್ತಂತಹ ವ್ಯಕ್ತಿಯನ್ನು ಸಹ ಪೂಜೆ ಮಾಡುತ್ತಾರೆ.

ಈ ದೇವತೆಗಳ ಆಕಾರ ಹೇಗಿರುತ್ತದೆ. ಎಂದು ಹೇಳಲು ಆಗುವುದಿಲ್ಲ. ಕೆಲವರು ಲಿಂಗವನ್ನು ಪೂಜಿಸಿದರೆ ಕೆಲವರು ಬಾಣವನ್ನು ಬಡಿ ಕೋಲ ಪೂಜಿಸುತ್ತಾರೆ. ಮತ್ತೆ ಕೆಲವರು ಕಠಾರಿ, ತಾಮ್ರದ ಜಯರೇಖೆ, ಗಂಟೆ, ಧೂಪಾರತಿ, ಗಡಿಗೆ, ಕೇಲು, ಮೊದಲಾದ ವಸ್ತುಗಳನ್ನು ದೇವರೆಂದು, ಪೂಜಿಸುತ್ತಾರೆ. ಕಾಡುಗೊಲ್ಲರ ಪುರಾಣಗಳಲ್ಲಿ ಎತ್ತಪ್ಪ, ಜುಂಜಪ್ಪ, ಚಿತ್ತಯ್ಯ, ಕಾಟಯ್ಯ, ಮೊದಲಾದ ದೇವರನ್ನು ಇವರು. ಮಾನವ ರೂಪದಲ್ಲಿದ್ದವರು ಎಂದು ಮಾನವ ರೂಪದಲ್ಲಿಯೆ ಚಿತ್ರಿಸಿದ್ದಾರೆ. ಆದರೆ ಇವರ ವಸ್ತುಗಳನ್ನು ಮಾತ್ರ ಪೂಜಿಸುತ್ತಾರೆ. ಕಂಡುಗೊಲ್ಲರಲ್ಲಿ ಮೂಲದೇವರಿಗೆ ಒಂದು ದೇವಸ್ಥಾನ, ಉತ್ಸವ ದೇವರಿಗೆ ಇನ್ನೊಂದು ದೇವಸ್ಥಾನ ಕಟ್ಟಿರುತ್ತಾರೆ. ದೇವರ ಉತ್ಸವದಲ್ಲಿ ದೇವರ ಒಡವೆ ಛತ್ರಿ ಕಠಾರಿ ಮೊದಲಾದವುಗಳನ್ನು ಜೋಡಿಸಿರುತ್ತಾರೆ. ಇವರು ಉತ್ಸವ ಮೂರ್ತಿಯನ್ನು ವಿದ್ಯುತ್ ವೈಯರಿನ ಕೆಳಗೆ ತೆಗೆದುಕೊಂಡು ಹೋಗುವುದಿಲ್ಲವಂತೆ ತೆಗೆದುಕೊಂಡು ಹೋದರೆ ದೇವರಿಗೆ ಅಪಚಾರವಾಯಿತು. ಎಂದು ಅರ್ಥವಂತೆ ಆದುದ್ದರಿಂದ ಕಾಡುಗೊಲ್ಲರನ್ನು ವಿಧುವೆಯರಿಲ್ಲದೆ,

ವಿದ್ಯುತ್ ಇಲ್ಲದೆ, ವಿದ್ಯಾವಂತರಿಲ್ಲದೆ, ಊರು ಎಂದು ಹೇಳುತ್ತಾರೆ. ಈ ಮಾತು ಇತ್ತೀಚೆಗೆ ಬದಲಾಗಿರುವುದನ್ನು ಕಾಣುತ್ತವೆ. ವಿಧುವೆಯರಿಲ್ಲದಿರಬಹುದು. ವಿದ್ಯುತ್ ಬಂದಿದೆ. ಆದರೆ ದೇವರನ್ನು ತಂತಿಯ ಕೆಳಗಡೆ ತೆಗೆದುಕೊಂಡು ಹೋಗುವುದಿಲ್ಲ. ಇವರು ಅಕ್ಷರವನ್ನು ಕಲಿತು ವಿದ್ಯಾವಂತಾರಾಗಿರುವುದನ್ನು ಕಾಣುತ್ತವೆ.

**ಕಾಡುಗೊಲ್ಲರ ಕಸುಬು**

ಹುಲ್ಲುಗಾವಲು ಹಿಂದೆ ಹೆಚ್ಚಾಗಿದುದ್ದರಿಂದ ಕಾಡುಗೊಲ್ಲರು ಸಾವಿರಾರು ದನಗಳನ್ನು ಸಾಕುತ್ತಿದ್ದರು. ಹಾಲು, ಮೊಸರು, ಬೆಣ್ಣೆ, ತುಪ್ಪವನ್ನು ಮಾರಿ ಜೀವನ ನಡೆಸುತ್ತಿದ್ದರು. ಜುಂಜಪ್ಪನ ಕಾವ್ಯದಲ್ಲಿ ಬಂದಿರುವ ಸಾಂಸ್ಕೃತಿಕ ವೀರ ಜುಂಜಪ್ಪ, ಇವನ ಸೋದರ ಮಾವಂದಿರು ಏಳುಗೂಡಿನ ಎತ್ತುಗಳನ್ನು ಏಳುಗೂಡಿನ ಹಸುಗಳನ್ನು ಕಾದವರು. ಈ ಪಶುಪಾಲನೆಯಲ್ಲಿ ಇವರು ಕಷ್ಟಪಟ್ಟಿದ್ದು, ವಿರೋಧಿಗಳು ಮಾಡಿಸಿದ ಮಾಟ ಮಂತ್ರ ಎಚ್ಚರಿಕೆಯಿಂದ ಎದುರಿಸಿದ್ದು, ಇದನ್ನೆಲ್ಲಾ ನೋಡಿದರೆ ಕಾಡುಗೊಲ್ಲರು ಹಿಂದೆ ಹೆಚ್ಚಾಗಿ ದನಗಳನ್ನು ಸಾಕುತ್ತಿದ್ದರು ಎಂಬುದು ತಿಳಿಯುತ್ತದೆ. ಹುಲ್ಲುಗಾವಲು ಕಡಿಮೆಯಾದಂತೆ ವ್ಯವಸಾಯಕ್ಕಾಗಿ ಜನರು ಕಾಡನ್ನು ಆಕ್ರಮಿಸಿಕೊಂಡಂತೆ ಇವರಿಗೆ ದನ ಮೇಯಿಸಲು ಕಷ್ಟವಾಯಿತು. ದನಗಳ ಸಂಖ್ಯೆ ಕಡಿಮೆಯಾಯಿತು. ಇದರ ದೆಸೆಯಿಂದ ಇವರು ಕುರಿ ಸಾಕುವುದಕ್ಕೆ ಸುರು ಮಾಡಿದರು.

ಆದರೆ ಇಂದು ಕಾಡುಗೊಲ್ಲರ ಮುಖ್ಯ ಕಸುಬು ಕುರಿ ಸಾಕಾಣಿಕೆಯಾಗಿದೆ. ಕುರುಬರು ಕುರಿಯ ತುಪ್ಪಟವನ್ನು ಕತ್ತರಿಸಿ ಕಂಬಳಿ ನೇಯುತ್ತಾರೆ. ಈ ಕಾರಣದಿಂದ ಇವರುಗಳ ಬಳಕೆ ಹೆಚ್ಚಾಯಿತು. ಕಾಡು ಗೊಲ್ಲರಲ್ಲಿ ಹೆಚ್ಚು ಕುರಿಗಳನ್ನು ಹೊಂದಿರುವವನೆ ಶ್ರೀಮಂತ, ಕುರಿಗಳನ್ನು ಇವರು ಪ್ರತ್ಯೇಕವಾಗಿ ರೊಪ್ಪಗಳಲ್ಲಿ ಕೂಡಿ ಹಾಕುತ್ತಾರೆ. ಕುರಿಗಳನ್ನು ರಕ್ಷಿಸಲು ನಾಯಿಗಳನ್ನು ಸಾಕುತ್ತಾರೆ. ಕಾಡುಗೊಲ್ಲರು ಮಳೆಗಾಲದಲ್ಲಿ ನಾಲ್ಕೈದು ತಿಂಗಳು ಮಾತ್ರ ಹಟ್ಟಿಗಳಲ್ಲಿ ಇರುತ್ತಾರೆ. ಉಳಿದ ದಿನಗಳಲ್ಲಿ ಇವರು ಕುರಿಯ ಮೇವಿಗಾಗಿ ಊರೂರು ಅಲೆಯುತ್ತಾರೆ. ಜೊತೆಯಲ್ಲಿ ಹೆಂಡತಿ ಮಕ್ಕಳನ್ನು ಕರೆದುಕೊಂಡು ಹೋಗುತ್ತಾರೆ. ಇವರುಗಳು ಸ್ಥಳದಿಂದ ಸ್ಥಳಕ್ಕೆ ಹೋಗುವಾಗ ಸಾಮಾನುಗಳನ್ನು ಹೊತ್ತುಕೊಂಡು ಹೋಗಲು ಕತ್ತೆಗಳನ್ನು ಸಾಕುತ್ತಿದ್ದರು. ಹಾಲು ತುಪ್ಪಕ್ಕಾಗಿ ದನಕರುಗಳನ್ನ ಜೊತೆಯಲ್ಲಿ ಹೊಡೆದುಕೊಂಡು ಹೋಗುತ್ತಿದ್ದರು. ಇವರು ಮೇಕೆಗಳನ್ನು ಸಾಕುತ್ತಿದ್ದರು.

ಕುರಿಗಳನ್ನು ದನಗಳನ್ನು ಕಾಯುವಾಗ ಕಾಡುಗೊಲ್ಲರು, ಪಿಳ್ಳಿಂಗೋವಿಯನ್ನ ಗಣೆಯನ್ನು ಉಪಯೋಗಿಸುತ್ತಿದ್ದರು. ಕಾಡುಗೊಲ್ಲರಲ್ಲಿ ಕೆಲವರು, ಇಂದು ವ್ಯವಸಾಯ ಮಾಡುತ್ತಿದ್ದಾರೆ. ವ್ಯವಸಾಯದ ಜೊತೆಗೆ ಕುರಿ, ದನ, ಮೇಕೆಯನ್ನು ಸಾಕುತ್ತಾರೆ. ವ್ಯವಸಾಯ ಮಾಡುವವರಿಗಿಂತ ಕುರಿ, ದನ, ಮೇಕೆ, ಸಾಕುವವರೆ ಹೆಚ್ಚು ಇವರು ಹೋಲಗಳನ್ನು ಹೆಚ್ಚಾಗಿ ಹೊಂದಿದ್ದಾರೆ. ತೋಟ, ಗದ್ದೆಗಳನ್ನು ಹೊಂದಿರುವವರು ತೀರ ಕಡಿಮೆ ಹೀಗೆ ಇಲ್ಲದವರು ಬೇರೆಯವರ ಹತ್ತಿರ ಗೇಣಿಗೆ ಮಾಡುತ್ತಾರೆ.

ಕಾಡುಗೊಲ್ಲರಲ್ಲಿ ಸರ್ಕಾರಿ ನೌಕರಿಯಲ್ಲರುವವರು ತೀರಾ ಕಡಿಮೆ, ರಾಜಕೀಯ ಕ್ಷೇತ್ರದಲ್ಲಿ ಬೆರಳೆಣಿಕೆ.

**ಕಾಡುಗೊಲ್ಲರ ವೇಷ ಭೂಷಣಗಳು**

ಕರಿಯ ಕಂಬಳಿ ಪ್ರಿಯರಾದ ಕಾಡು ಗೊಲ್ಲರ ವೇಷ ಭೂಷಣಗಳು ತೀರಾ ಸರಳ. ಕಂಬಳಿಯು ಇವರಿಗೆ ಹಲವು ಪ್ರಯೋಜನಗಳನ್ನ ಮಾಡುತ್ತದೆ. ಚಳಿಯಾದಾಗ ಹೊದೆಯುವುದಕ್ಕೆ, ಮಳೆ ಬಂದಾಗ ಗೊಪ್ಪೆಯನ್ನು ಮಾಡಿ ತಲೆಯ ಮೇಲೆ ಹಾಕಿಕೊಂಡು ಮಳೆಯಿಂದ ರಕ್ಷಿಸಿಕೊಳ್ಳವುದಕ್ಕೆ, ಮಲಗುವಾಗ ಹಾಸಿಕೊಳ್ಳುವುದಕ್ಕೆ, ಎಲ್ಲಿ ಕುಳಿತರೂ ಸಲಿಸಾಗಿ ಹಾಸಿ ಕೂರುವುದಕ್ಕೆ ಹೀಗೆ ಇದರ ಉಪಯೋಗ ಬಹಳ. ಸಾಮಾನ್ಯವಾಗಿ ಗಂಡಸರ ಮತ್ತು ಹೆಂಗಸರ ಉಡುಪುಗಳು ಸರಳವಾಗಿರುತ್ತದೆ. ಮುದುಕರು ಲಂಗೋಟಿಯನ್ನು ಕಟ್ಟಿ. ಒಂದು ಕಂಬಳಿ ಹೊದ್ದಿರುತ್ತಾರೆ. ಕೆಲವರು ಲಂಗೋಟಿಕಟ್ಟಿ, ಮೇಲೆ ಉದ್ದವಾದ ಅಂಗಿಯನ್ನು ತೊಟ್ಟಿರುತ್ತಾರೆ. ಪಾದದವರೆಗೆ ಕಚ್ಚೆಯನ್ನು ಹಾಕುವವರು ಕಡಿಮೆ, ಸಾಮಾನ್ಯವಾಗಿ ಮಂಡಿಯವರೆಗೆ ಕಚ್ಚೆಯನ್ನು ಹಾಕಿರುತ್ತಾರೆ. ತಲೆಗೆ ಕೆಂಪು ರುಮಾಲು ಸುತ್ತಿರುತ್ತಾರೆ. ಇವರಿಗೆ ಎಲೆ ಅಡಿಕೆ ತುಂಬ ಪ್ರಿಯವಾದ ದೆಸೆಯಿಂದ ಇವರ ಅಂಗಿಯಲ್ಲಿ ಹೊಟ್ಟೆಯ ಮೇಲೆ ಜೇಬುಗಳನ್ನು ಇರಿಸಿಕೊಳ್ಳುತ್ತಿದ್ದರು ಅದರಲ್ಲಿ ಕುಟ್ಟಣಿಗೆ, ಸುಣ್ಣಕಾಯಿ ಡಬ್ಬವನ್ನ, ಎಲೆ, ಅಡಿಕೆಯನ್ನು ಇಟ್ಟುಕೊಳ್ಳುತ್ತಿದ್ದರು. ಗಂಡಸರು ಕಂಚಿದಟ್ಟಿಯನ್ನು ಸೊಂಟಕ್ಕೆ ಸುತ್ತಿ ಕೊಂಡಿರುವುದು ಏಳು ಮೊಳದ ಪಾಗನ್ನು ತಲೆಗೆ ಸುತ್ತಿಕೊಳ್ಳುವುದು ಕಾಡು ಗೊಲ್ಲರಲ್ಲಿ ದೊಡ್ಡಸ್ತಿಕೆಯ ಸಂಕೇತ. ಸಂಪ್ರದಾಯಸ್ಥ ಹೆಂಗಸರು ರವಿಕೆಗಳನ್ನು ತೊಡುವುದಿಲ್ಲ. ಕೆಂಪು ಅಂಚಿನ ಬಿಳಿಯ ಸೀರೆಯನ್ನು ಉಡುತ್ತಾರೆ. ಆದರೆ ಇತ್ತೀಚಗೆ ರವಿಕೆಯನ್ನು ತೊಡುತ್ತಾರೆ. ಕೆಂಪು ಅಂಚಿನ ಸೀರೆಯನ್ನು ಉಡುವುದಿಲ್ಲ. ಬಣ್ಣ ಬಣ್ಣದ ಸೀರೆ ಉಡುತ್ತಾರೆ.

ಮದುವೆಯಲ್ಲಿ ಗಂಡು ಮುಂಗೈಬದ್ದು. ಬಲಗೈ ತೋಳಿಗೆ ಬಟ್ಟನ ಸಲಗೆ ಕಿವಿಗಳಿಗೆ ಪಾಟಲಾಕು. ಬಲಗಿವಿಗೆ ಅರೆಮುರು, ಎಡಗಿವಿಗೆ ಸಿಂಹದ ಮುರು, ಕೊರಳಿಗೆ ಜೈನು, ಹೆಗಲ ಮೇಲೆ ಕರಿಕಂಬಳಿ ಸೊಂಟಕ್ಕೆ ಪಂಚೆಕಟ್ಟಿ. ತಲೆಗೆ ರುಮಾಲು, ಕಾಲಿಗೆ ಮಟ್ಟಮೇನಗಪ್ಪದ ಅಡಿಕೆ ಚೀಲ ಹಾಕಿರುತ್ತಾರೆ. ಹೆಣ್ಣಿಗೆ ಕಾಲಂದುಗೆ ಗೆಜ್ಜೆಪಟ್ಟಿ, ಸುತ್ತು, ಮಿಂಚು, ಪಿಲ್ಲಿಬೇಸರಿ ಹಾಕುತ್ತಾರೆ. ಮದುವೆಗೆ ಮೊದಲು ಬೆಳ್ಳಿಯ ಕಡಗ ಹಾಕಿಕೊಳ್ಳುವ ಹೆಂಗಸರಿಗೆ ಮದುವೆಯಲ್ಲಿ ಎಡಗೈಗೆ ಗೊಲ್ಲಕಡಗವನ್ನು ತೊಡುತ್ತಾರೆ. ತಲೆಗೂದಲನ್ನು ಮದುವೆಯಲ್ಲಿ ಹೆಣೆದುಕೊಳ್ಳುವುದಿಲ್ಲ. ಗಂಡು ಹಾಕಿಕೊಂಡಿರುತ್ತಾರೆ. ಸಂಪ್ರದಾಯಸ್ಥ ಮಹಿಳೆಯರು ಮದುವೆಯ ನಂತರವು ಕುಂಕುಮ ಇರುವುದಿಲ್ಲ. ವಿಧುವೆಯರು ಕೆಲವು ಕಡೆ ಹಣೆಗೆ ವಿಭೂತಿಯನ್ನು ಇಡುತ್ತಾರೆ. ಹೆಂಗಸರ ಮೈ ಮೇಲೆ ಹೆಚ್ಚು ಆಭರಣಗಳಿರುವುದಿಲ್ಲ. ಇವರು ನಾಗರ ಆಕಾರದ ತೋಳು ಬಂದಿಯನ್ನು ತೊಡುತ್ತಾರೆ ಬಳೆಗಳನ್ನು ತೊಡುತ್ತಾರೆ. ಗಂಡ ಸತ್ತ ನಂತರ ಕೃಷ್ಣನೆ ನನ್ನ ಗಂಡ ಎಂಬ ನಂಬಿಕೆಯಿಂದ ಇವರು ಬಳೆಗಳನ್ನು ತಗೆಯುವುದಿಲ್ಲ. ಇತ್ತೀಚೆಗೆ ಕುಂಕುಮವನ್ನು ತೊಡುತ್ತಾರೆ. ಆದರೆ ಗಂಡ ಸತ್ತ ನಂತರ ಅದನ್ನು ತಗೆಯುವುದಿಲ್ಲ. ಹೀಗೆ ಇವರ ವೇಷ ಭೂಷಣಗಳು ವಿವಿಧತೆಯಿಂದ ಕೂಡಿದೆ.

ಕಾಡುಗೊಲ್ಲರಲ್ಲಿ ಸಮೃದ್ಧವಾದ ಮೌಖಿಕ ಸಾಹಿತ್ಯಸಿಗುತ್ತದೆ. ಇವುಗಳಲ್ಲಿ ಧಾರ್ಮಿಕ ಸಾಹಿತ್ಯ ಪುರಾಣಗಳ ರೂಪದಲ್ಲಿ ಲಭ್ಯವಾಗುತ್ತದೆ. ಜುಂಜಪ್ಪ, ಎತ್ತಪ್ಪ ಚಿತ್ರದೇವರು, ಕಾಟಮದೇವರು, ಕೇತೆ ದೇವರು, ಪಾತೇದೇವರು, ಮಾರಸಂದ್ರದ ಮಾರಮ್ಮ, ಭೂತಪ್ಪ ಇವರ ಬಗ್ಗೆ ಸಿಗುವ ಸಾಹಿತ್ಯ ನೂರಾರು ಪುಟಕ್ಕೆ ಮಿರಿದ್ದು ಇವುಗಳಲ್ಲಿ ಚಲುವರಾಜುರ ಜುಂಜಪ್ಪನ ಕಾವ್ಯ ತುಂಬಾ ದೀರ್ಘವಾದುದು. ಇದನ್ನು ಅವರು ಏಳು ನೂರ ಐವತ್ತು ಪುಟಗಳಿಗೂ ಮೀರಿದು ಸಾಹಿತ್ಯವನ್ನು ನಮಗೆ ಕೊಟ್ಟಿದ್ದಾರೆ. ಇದರಿಂದ ಕಾಡುಗೊಲ್ಲರ ಸಾಹಿತ್ಯವನಷ್ಟೆ ಅಲ್ಲ ಅವರ ಬದುಕು, ನಂಬಿಕೆ, ಆಚಾರ ವಿಚಾರಗಳನ್ನು ತಿಳಿಯಬಹುದು, ಅವರು ಬಳಸಿರುವ ಸಹಜ ನುಡಿಗಳು, ಇನ್ನೊಂದು ವಿಶೇಷವೆಂದರೆ ದೇವರು ಅವರಿಗೆ ಹತ್ತಿರ ವಾಗಿದ್ದುದ್ದ ಒಂದು ವಿಶೇಷ ಜುಂಜಪ್ಪನಿಗೆ ದೇವರು ನೆನೆದ ತಕ್ಷಣ ಬಂದು ಸಹಾಯ ಮಾಡಿರುವುದನ್ನು ಮತ್ತು ದೇವರು ಭಕ್ತರಿಗೆ ಅನ್ಯಾಯವಾಗುವಾಗ ಅದನ್ನು ಯಾವುದೇ ರೂಪದಲ್ಲಾದವರು ಬಂದು ತಡೆದು ಭಕ್ತರನ್ನು ರಕ್ಷಿಸಿರುವುದನ್ನು ಕಾಣಬಹುದು ಇದರಲ್ಲಿ ಅವರ ಪ್ರಾಣಿ ಪ್ರೇಮ ಎಷ್ಟಿತ್ತೆಂದರೆ ಪ್ರಾಣಿಗಳು ಸಹ ಇವರ ಜೊತೆ ಮಾತನಾಡುತ್ತಿದ್ದವಂತೆ, ಈ ಸಾಹಿತ್ಯಗಳು ಕಾಡುಗೊಲ್ಲರ ಸಂಸ್ಕೃತಿಯ ಸ್ವರೂಪದ ಮೂಲವನ್ನು ಅರ್ಥಮಾಡಿ ಕೊಳ್ಳುವುದಕ್ಕೆ ಸಹಾಯ ಮಾಡುತ್ತವೆ.

ಇವರ ಐತಿಹ್ಯಗಳು ಸಹ ಅಷ್ಟೆ ಮುಖ್ಯವಾದ ಪಾತ್ರವಹಿಸುತ್ತದೆ. ಇವು ಕಾಡುಗೊಲ್ಲರ ಪುರಾಣದ ಅಂಶವನ್ನು ಹೇಳುತ್ತವೆ ಒಂದೊಂದು ಹಟ್ಟಿಗಳಲ್ಲಿ ಒಬ್ಬೊಬ್ಬರಾದರು ಕತೆಗಾರರು ಸಿಗುತ್ತಾರೆ. ಕಾಡುಗೊಲ್ಲರ ದಡ್ಡತನ, ಬುದ್ಧಿ ವಂತಿಕೆ, ಮೋಸ ಇವುಗಳ ಬಗ್ಗೆಯೇ ಸಾಕಷ್ಟು ಕತೆಗಳಿರುವುದು ಕಂಡು ಬರುತ್ತದೆ.

ಹೆಣ್ಣು ಮಕ್ಕಳು ಮೈನೆರೆದಾಗ ಮದುವೆಯ ಸಂದರ್ಭದಲ್ಲಿ ಹೆಂಗಸರು ಹಾಡುತ್ತಾರೆ. ಪುರಾಣಗಳಿಗೆ ಸಂಬಂಧಿಸಿದ ಹಾಡುಗಳನ್ನು ಗಂಡಸರ ಹಾಡುಗಳು ರೀತಿಯ ಬೇರೆ ಹೆಂಗಸರು ಹಾಡುವ ರೀತಿಯ ಬೇರೆ, ಗಂಡಸರ ಹಾಡುಗಳಲ್ಲಿ ವೀರರಸವಿರುತ್ತದೆ. ಹೆಂಗಸರ ಹಾಡುಗಳಲ್ಲಿ ಕರುಣರಸ ಪ್ರಧಾನವಾದುದು.

ಕಾಡುಗೊಲ್ಲರು ನಾಟಿ ವೈದ್ಯದಲ್ಲಿ ಹೆಸರನ್ನು ಗಳಿಸಿದವರು, ಇವರು ಪಶುವೈದ್ಯವನ್ನು ಚನ್ನಾಗಿ ಬಲ್ಲರು ದನ, ಕುರಿ, ಮೇಕೆಯನ್ನು ಸಾಕುತ್ತಿದ್ದದ್ದರಿಂದ ಕಾಡಿನಲ್ಲಿ ಸುತ್ತಾಡುತ್ತಿದುದರಿಂದ ಅಗತ್ಯಕ್ಕೆ ತಕ್ಕಂತೆ ಔಷದಿಗಳನ್ನು ಕಂಡು ಕೊಂಡರು ಕಾಡುಗೊಲ್ಲರು ಪ್ರಾಣಿಗಳಗಷ್ಟೆ ಅಲ್ಲದೆ. ಮನುಷ್ಯರಿಗೂ ಉತ್ತಮ ಔಷಧಿಯನ್ನು ನೀಡಿ ಕಾಯಿಲೆ ವಾಸಿ ಮಾಡುವ ವೈದ್ಯರು ಸಹ ಇದ್ದಾರೆ, ತಮಗೆ ಕಾಯಿಲೆ ಬಂದಾಗ ಆಸ್ಪತ್ರೆಗೆ ಹೋಗದಿರುವುದರಿಂದ ಮಕ್ಕಳ, ಬಸುರಿಯವರ ಬಾಣಂತಿಯರ ವೈದ್ಯದಲ್ಲಿ ಪರಿಣಿತವಾದ ಹೆಂಗಸರು ಇದ್ದಾರೆ ವೈದ್ಯವನ್ನು ಉಪಕಸುಬಾಗಿ ಮಾಡಿಕೊಂಡಿರುವವರು ಕಾಡುಗೊಲ್ಲರಲ್ಲಿದ್ದಾರೆ. ಕಾಡು ಗೊಲ್ಲರ ವೈದ್ಯ ನಮ್ಮ ಕರ್ನಾಟಕದ ವೈದ್ಯಕ್ಕೆ ಬಹು ಕೊಡುಗೆ ನೀಡಿದೆ.

ಕಾಡುಗೊಲ್ಲರು ಬಿಡುವಿನ ವೇಳೆಯಲ್ಲಿ ತಮ್ಮ ಮನರಂಜನೆಗಾಗಿ ಕೋಲಾಟವನ್ನ ಆಡುತ್ತಿದ್ದರು. ಇವರು ಕೋಲಗಿ ತಕ್ಕಂತೆ ಹೆಜ್ಜೆಯನ್ನು ಹಾಕಿ ಕುಣಿಯುತ್ತಾರೆ. ಕೋಲಾಟದಲ್ಲಿ ಗೆಜ್ಜೆ ಕೋಲಾಟ ಇವರಲ್ಲಿ ಹೆಚ್ಚು ಪ್ರಚಲಿತ ಹಾಗೆಯೇ ಗಣೆ ಊದುವುದು, ಪಿಳ್ಳಂಗೋವಿಯನ್ನ ಊದುವುದು ಇವರ ಪ್ರಮುಖ ಮನೆರಂಜನೆಯಲೊಂದು,

"ಜುಂಜಪ್ಪನ ಕಥೆ ಕನ್ನಡ ಜನಪದ ಕಾವ್ಯಗಳ ಸಾಲಿನ ಒಂದು ಅನರ್ಘ್ಯ ಕತೆ. ವಿಸ್ತಾರದ ದೃಷ್ಟಿಯಿಂದ ಇದು ಮೂರು ನಾಲ್ಕು ರಾತ್ರಿಗಳ ಕಥೆ, ಮೂರು ತಲೆಮಾರು ಕಥೆ, ಇತರ ಮೇಳಗಳಂತೆ ಜನಪದ ವಾದ್ಯಗಳ ಅಬ್ಬರ ಇಲ್ಲಿಲ್ಲ. ಇಲ್ಲಿರುವ ವಾದ್ಯಗಣೆ, ಎರಡು ಮೊಳ ಉದ್ದದ ಬಿದಿರಿನ ಕೊಳಲು, ಇದನ್ನು ಊದುವವನು ಒಬ್ಬನಾದರೆ, ಅದರ ಮಧುರ ನಾದಕ್ಕೆ ಬೆರತು ಬರುವಂತೆ ಜುಂಜಪ್ಪನ ಕಥೆಯನ್ನು ಅಷ್ಟೇ ಮಧುರವಾಗಿ ಹಾಡುವವನು ಇನೊಬ್ಬ

ಅವನ ಕಿವಿಯ ಬಳಿಗೆ ವಾಲಿಕೊಂಡು ಸೊಲ್ಲು ಕೊಡುವವನು. ಮಗದೊಬ್ಬ, ಇದೊಂದು ಪದ್ಯಕಾವ್ಯ, ಶುದ್ಧ ತ್ರಿಪದಿಯಲ್ಲಿಯೇ ಸಮಗ್ರ ಕಥೆ ಲಭ್ಯವಿದೆ. ಹಾಡುವ ಮಟ್ಟು ಮೋಹಕ, ಮಾಡುವ ಕಥೆಯೂ ಆಕರ್ಷಿಕ ಕೇಳುವ ಕಿವಿ ಯಕ್ಷಲೋಕದ ಕಲ್ಪನಾ ಲೋಕದಲ್ಲಿ ತೇಲುತ್ತದೆ. ಗಣೆಯ ದಿವ್ಯನಾದದ ಅಲೆಗಳನ್ನೆರಿ"[24]

ಹೀಗೆ ಕಾಡುಗೊಲ್ಲರು ತಮ್ಮ ವಿಶಿಷ್ಠ ಸಂಪ್ರದಾಯದಿಂದ ವಿಶಿಷ್ಟ ಕಾವ್ಯದಿಂದ ಎಲ್ಲಾ ಜನಪದ ಕಾವ್ಯಗಳಿಗಿಂತ ಕಾಡುಗೊಲ್ಲರ ಕಾವ್ಯ ಅತ್ಯುತ್ತಮ ಎನ್ನುವಂತಾಗಿದೆ.

---

[24] ಶೀನಂ. ಶಂಕರ ನಾರಾಯಣ, ಕಾಡುಗೊಲ್ಲರ ಸಂಪ್ರದಾಯ ಮತ್ತು ನಂಬಿಕೆಗಳು, ಪುಟ ಸಂಖ್ಯೆ 181.

# ಅಧ್ಯಾಯ – 4

## ಕಾಡುಗೊಲ್ಲರ ಜನಜೀವನ

**ಪೀಠಿಕೆ :**

ಜುಂಜಪ್ಪನ ಕಾವ್ಯವನ್ನು ಅಧ್ಯಯನ ಮಾಡುವುದರಿಂದ ಅಲ್ಲಿ ಬರುವ ಕಾಡುಗೊಲ್ಲರ ಜನ ಜೀವನವನ್ನು ತಿಳಿಯುವುದು ಮುಖ್ಯವಾಗಿದೆ. ಅಲ್ಲಿನ ಜನರೆ ಜುಂಜಪ್ಪನ ಕಾವ್ಯವನ್ನು ಕಟ್ಟಿರುವುದರಿಂದ ಕಾಡುಗೊಲ್ಲರ ಜನಜೀವನವನ್ನು ತಿಳಿಯುವುದು ಮುಖ್ಯ ಇದರಲ್ಲಿ ಅವರ ಸಂಪ್ರದಾಯಗಳ ಬಗ್ಗೆ ತಿಳಿಯಬೇಕು. "ಒಂದು ಸಾಮಾಜಿಕ ವರ್ಗ ಪರಂಪರಾನುಗತವಾಗಿ ಅನುಸರಿಸುತ್ತ ಬಂದಿರುವ ಕ್ರಿಯಾ ವಿನ್ಯಾಸವನ್ನು ಸಂಪ್ರದಾಯ ಎಂದು ಕರೆಯಬಹುದು. ಒಬ್ಬೊಬ್ಬ ವ್ಯಕ್ತಿಯ ಅಭ್ಯಾಸ ಸಂಪ್ರದಾಯ ಎನಿಸಿಕೊಳ್ಳುವುದಿಲ್ಲ. ಅಂದರೆ ಸಂಪ್ರದಾಯ ಎನ್ನುವುದು ವೈಯಕ್ತಿಕವಾದುದಲ್ಲ, ಸಾಮೂಹಿಕವಾದುದು ಜನರು ಮಾಡುವುದು ಏನು ಎಂಬುದನ್ನು ತಿಳಿಸುವುದೇ ಸಂಪ್ರದಾಯ"[25]. ಹೀಗೆ ಕಾಡುಗೊಲ್ಲರ ಜನಜೀವನವನ್ನು ತಿಳಿಯಬೇಕಾದರೆ ಅವರು ಸಾಮೂಹಿಕವಾಗಿ ಅನುಸರಿಸುವ ಸಂಪ್ರದಾಯವನ್ನು ತಿಳಿದುಕೊಳ್ಳಬೇಕಾಗುತ್ತದೆ.

**ಹಬ್ಬಗಳ ಮತ್ತು ಜಾತ್ರೆಗಳು :** ಇವರು ದೀಪಾವಳಿ, ಯುಗಾದಿ, ಸಂಕ್ರಾಂತಿ, ಶಿವರಾತ್ರಿ ಮುಂತಾದ ಹಬ್ಬಗಳನ್ನು ಆಚರಿಸುತ್ತಾರೆ. ಶಿವರಾತ್ರಿಯನ್ನು ಇವರು 'ಕಾಳಿ ಹಬ್ಬ' ಎಂಬ ಹೆಸರಿನಿಂದ ಆಚರಿಸುತ್ತಾರೆ. ಬಸವನ ಹಬ್ಬದಲ್ಲಿ ಎತ್ತುಗಳಿಗೆ ಹೋರಿಗಳಿಗೆ ವಿಶೇಷವಾಗಿ ಪೂಜೆ ಮಾಡುತ್ತಾರೆ. ಕಾಡುಗೊಲ್ಲರೆ ಆಚರಿಸುವ ವಿಶೇಷ ಹಬ್ಬಗಳು ಇಲ್ಲ.

ಕಾಡುಗೊಲ್ಲರ ಜಾತ್ರೆಗಳು ದೀಪಾವಳಿಯ ಸಂದರ್ಭದಲ್ಲಿ ನಡೆಯುತ್ತವೆ. ಜುಂಜಪ್ಪ, ಎತ್ತಪ್ಪ ಮತ್ತು ಚಿತ್ರದೇವರ ಜಾತ್ರೆಗಳು. ಜಾತ್ರೆಗಳಲ್ಲಿ ಜಾಂಡೇವು ಎಂಬ ಕಾವಿಯ ಬಣ್ಣದ ಬಾವುಟ ಹಾರಿಸುವುದು, ಹಾಲು ಮೀಸಲು ಕರೆಯುವುದು, ದೇವರಿಗೆ ಗಂಗಾಸ್ನಾನ ಮಾಡಿಸುವುದು, ಹರಕೆಗಳನ್ನು ತೀರಿಸುವುದು, ದೀಪ ಉರಿಸುವುದು ಮಾಡುತ್ತಾರೆ. ಜಾತ್ರೆಗಳಿಗೆ ಜಾಂಡೇವು ಮೂಲಕ ಚಾಲನೆ ದೊರೆತ ಮೇಲೆ ಪೂಜಾರಿ ಮತ್ತು ಇನ್ನೂ ಕೆಲವಾರು ಭಕ್ತರು ದೇವರನ್ನು ವಾದ್ಯ ಸಮೇತ ಹಳ್ಳಕ್ಕೆ ತೆಗೆದುಕೊಂಡು ಹೋಗಿ ಸ್ನಾನ ಮಾಡಿಸುತ್ತಾರೆ. ಭಕ್ತರು ಹರಕೆ ಮಾಡಿಕೊಂಡು ತಂದಿರುವ ತುಪ್ಪವನ್ನು ದೇವಸ್ಥಾನದ ಮುಂದಿನ ದೊಡ್ಡದಾದ ಹಿತ್ತಾಳೆಯ

---

[25] ತೀನಂ. ಶಂಕರ ನಾರಾಯಣ, ಕಾಡುಗೊಲ್ಲರ ಸಂಪ್ರದಾಯ ಮತ್ತು ನಂಬಿಕೆಗಳು, ಪುಟ ಸಂಖ್ಯೆ 21

ದೀಪದ ಕಂಬಕ್ಕೆ ಹಾಕುತ್ತಾರೆ. ಕಾಡುಗೊಲ್ಲರ ಮನೆಯಲ್ಲಿ ಯಾರಿಗಾದರೂ ಚೇಳು, ಹಾವು, ವಂಡರಗಪ್ಪೆ ಕಡಿದಾಗ ಮತ್ತು ದನಗಳಿಗೆ ಉಣ್ಣೆ ಹತ್ತಿದ್ದಾಗ ಜುಂಜಪ್ಪ, ಎತ್ತಪ್ಪ, ಚಿತ್ರದೇವರಿಗೆ ಹರಿಕೆ ಹೊತ್ತಿರುತ್ತಾರೆ. ಜುಂಜಪ್ಪನಿಗೆ ಜಾತ್ರೆಗಳಲ್ಲಿ ಜನರು ಅವರ ಶಕ್ತಿಯನುಸಾರವಾಗಿ ಚಿನ್ನದ ಅಥವಾ ಬೆಳ್ಳಿಯ ಹಾವು, ಚೇಳು, ವಂಡರಗಪ್ಪೆಯನ್ನು ಮಾಡಿಸಿ ಹರಕೆ ಒಪ್ಪಿಸುತ್ತಾರೆ.

ಹಾಗೆಯೇ ಕಾಟುಮದೇವರ ಜಾತ್ರೆಯನ್ನು ಶಿವರಾತ್ರಿಗೆ ಒಂದುವಾರ ಮೊದಲು ನಡೆಯುತ್ತದೆ. ಈ ಜಾತ್ರೆಯಲ್ಲಿ ಕೆಲವಾರು ವಿಶೇಷ ಕಾರ್ಯಕ್ರಮಗಳಲ್ಲಿ ಜಾತ್ರೆ ನಡೆಯುತ್ತದೆ. ಈ ಕಾರ್ಯಕ್ರಮದಲ್ಲಿ ದೇವಸ್ಥಾನದ ಬೇಲಿಗೆ ಜಾಲಿ ಮುಳ್ಳನ್ನು ಹಾಕುವುದು ಒಂದು. ಈ ದೇವಸ್ಥಾನದ ಸುತ್ತ ಮಣ್ಣಿನ ಗುಡ್ಡವಿದ್ದು ಸುತ್ತ ಜಾಲಿ ಮುಳ್ಳನ್ನು ಬೇಲಿ ಹಾಕಿರುತ್ತಾರೆ. ಎರಡಾಳುದ್ದ ಎತ್ತರವಿರುತ್ತದೆ. ಇದಕ್ಕೆ ಒಂದು ಹೆಬ್ಬಾಗಿಲಿದ್ದು, ವರ್ಷಕ್ಕೆ ಒಂದೇ ಸಾರಿ ಜಾತ್ರೆಯ ಸಮಯದಲ್ಲಿ ಮಾತ್ರ ತೆಗೆಯುತ್ತಾರೆ. ಆಗ ಮಾತ್ರ ಭಕ್ತಾಧಿಗಳು ಈ ಬಾಗಿಲಿನಿಂದ ದೇವಸ್ಥಾನದ ಒಳಕ್ಕೆ ಹೋಗಬಹುದು. ಇದ್ದ ಸಮಯದಲ್ಲಿ ಮುಚ್ಚಿರುತ್ತಾರೆ. ದೇವಸ್ಥಾನದ ಪಕ್ಕ ಪೂಜಾರಿಯ ಗುಡಿಸಲು ಇರುತ್ತದೆ. ಪಕ್ಕದಲ್ಲಿ ಒಂದು ಕಿರುದಾರಿ ಮಾಡಿ ಚಿಕ್ಕ ತಡಿಕೆಯನ್ನು ಅಲ್ಲಿ ಕಟ್ಟಿರುತ್ತಾರೆ. ಪೂಜಾರಿಯ ಅಪ್ಪಣೆ ಇಲ್ಲದೆ ಯಾರು ಒಳಗಡೆ ಹೋಗುವ ಆಗಿಲ್ಲ. ಕಾಡುಗೊಲ್ಲರಲ್ಲದವರನ್ನು ಒಳಗಡೆ ಸೇರಿಸುವುದಿಲ್ಲ. ಇಲ್ಲಿ ಇನ್ನೊಂದು ವಿಶೇಷವೆಂದರೆ ಜಾತ್ರೆಯ ಕಾಲದಲ್ಲಿ ಒಂದು ಮತ್ತು ಎರಡನೇ ದಿನ ಬರುವ ಭಕ್ತಾದಿಗಳು ಒಂದೊಂದು ಗಾಡಿ ಜಾಲಿ ಮುಳ್ಳನ್ನು ತಂದು ಬೇಲಿಗೆ ಹಾಕಬೇಕು. ಮೂರು ನಾಲ್ಕನೇ ದಿನಗಳಲ್ಲಿ ಭಕ್ತರು ತಾವು ತಂದಿರುವ ತುಪ್ಪವನ್ನು ದೀಪಕ್ಕೆ ಹಾಕಿ ಪೂಜೆ ಮಾಡಿಸಿ ಐದನೇ ದಿನ ಹಟ್ಟಿ ಹತ್ತಿರವಿರುವ ಹುತ್ತಕ್ಕೆ ಕರಿಯ ಕಂಬಳಿಯನ್ನು ಸುತ್ತಿ ಪೂಜೆ ಮಾಡುತ್ತಾರೆ. ಹೀಗೆ ಒಂದು ವಾರದವರೆಗೆ ಪೂಜೆ ಮುಂದುವರಿಸುತ್ತಾರೆ.

ಪಾತೇದೇವರ ಜಾತ್ರೆಯು ಪ್ರತಿ ವರ್ಷ ನಡೆಯುವುದಿಲ್ಲ. ಐದು ವರ್ಷಗಳಿಗೊ ಹತ್ತು ವರ್ಷಗಳಿಗೊ ನಡೆಸುತ್ತಾರೆ. ಜಾತ್ರೆ ಮಾಡಿಸುವುದಾಗಿ ಹರಕೆ ಮಾಡಿಕೊಂಡವರು ಮಾತ್ರ ಜಾತ್ರೆ ಮಾಡಿಸುತ್ತಾರೆ.

ಕಾಡುಗೊಲ್ಲರಲ್ಲಿ ತುಂಬ ವೈಭವಯುತವಾಗಿ ನಡೆಯುವ ಜಾತ್ರೆ ಎಂದರೆ ಕೇತೇದೇವರ ಜಾತ್ರೆ, ಜನವರಿ 4ನೇ ತಾರೀಖು ಶುರುವಾಗುವ ಈ ಜಾತ್ರೆ ಸುಮಾರು 29 ದಿನಗಳ ಕಾಲ, ದಿನದಿನ ವಿವಿಧ ಆಚರಣೆಗಳಿಂದ ನಡೆಯುತ್ತದೆ.

ಭೂತಪ್ಪ ಮತ್ತು ಮಾರಮ್ಮನ ಜಾತ್ರೆ ಜುಂಜಪ್ಪನ ಕಾವ್ಯದಲ್ಲಿ ಬರುವ ಪುರಲಹಳ್ಳಿ ಭೂತಪ್ಪ ಕೆಲವು ಸಂದರ್ಭದಲ್ಲಿ ಜುಂಜಪ್ಪನಿಗೆ ಸಹಾಯ ಮಾಡಿದ್ದರಿಂದ ಕಾಡುಗೊಲ್ಲರು ಈ ಭೂತಪ್ಪನು ಸಹ ದೇವರಾಗಿದ್ದು ಪೂಜಿಸುತ್ತಾರೆ. ಹಾಗೆಯೇ ಗೌರಸಂದ್ರಮಾರಕ್ಕನು ಸಹ ಜುಂಜಪ್ಪನಿಗೆ ಹಲವು ಸಂದರ್ಭದಲ್ಲಿ ಸಹಾಯ ಮಾಡಿರುವುದರಿಂದ ಹಾಗೆಯೇ ಬೇವಿನಹಳ್ಳಿ ಕರಿಯಮ್ಮ, ಕರೇಓಬೇನಹಳ್ಳಿ ಅಮ್ಮ ಮೊದಲಾದ ಮಾರಿ ದೇವತೆಗಳನ್ನು ಪೂಜಿಸಿ, ಜಾತ್ರೆ ನಡೆಸಿ ಕುರಿ ಮೇಕೆಯನ್ನು ಬಲಿಕೊಡುವ ಪದ್ಧತಿಯೂ ಇದೆ.

ನರಬಲಿಯ ಪ್ರಸ್ತಾಪವು ಇದೆ "ಜುಂಜಪ್ಪನ ಪುರಾಣದಲ್ಲಿ ಬರುವ ಬಲಿಯ ಕ್ರಮದಲ್ಲಿ ನರಬಲಿಯ ಪ್ರಸ್ತಾಪವಿದೆ. ನರಬಲಿ ಕೊಡುವುದೇ ಉದ್ದೇಶವಲ್ಲದಿದ್ದರೂ ಅನಿವಾರ್ಯವಾಗಿ ಬಂದಾಗ ನರಬಲಿಯನ್ನು ಕೊಡಬೇಕಾಗುವುದೆಂಬ ಸೂಚನೆ ಇಲ್ಲಿ ದೊರೆಯುತ್ತದೆ. ಪಾತೇದೇವರ ಪುರಾಣದಲ್ಲಿಯೂ ಇದಕ್ಕೆ ಆಧಾರ ದೊರಕುತ್ತದೆ."[26]

**ಕಾಣಿಕೆ ಮತ್ತು ಎಡೆ ಹಾಕುವುದು**

ಜುಂಜಪ್ಪನ ಭಕ್ತರಾದ ದಾಸಯ್ಯಗಳು ಬೇರೆಯವರ ರೀತಿ ಮನೆ ಮನೆ ಹೋಗದೆ, ಬೀದಿಯಲ್ಲಿ ಹೋಗುತ್ತಾರೆ. ಜನರು ಜುಂಜಪ್ಪನಿಗೆ ಕಟ್ಟಿಕೊಂಡಿರುವ ಕಾಣಿಕೆಯನ್ನು ದಾಸಪ್ಪನ ದೀಪದ ಕಂಭಕ್ಕೆ ಎಣ್ಣೆಯನ್ನು ಕಾಣಿಕೆಯನ್ನು ಹಾಕುತ್ತಾರೆ. ದಾಸಪ್ಪಗಳು ಬರದಿದ್ದರೆ ಅವರೆ ಜುಂಜಪ್ಪನ ಜಾತ್ರೆಗೆ ಹೋಗಿ ಹರಕೆ ಒಪ್ಪಿಸಿ ಕಾಣಿಕೆಯನ್ನು ಸಲ್ಲಿಸುತ್ತಾರೆ. ಹಾಗೆಯೇ ಎಡೆ ಹಾಕುವುದು ಸಹ ಕಾಡು ಗೊಲ್ಲರಲ್ಲಿಯೂ ರೂಢಿಯಲ್ಲಿದೆ. ಮಾರಿದೇವತೆಗಳಿಗೆ ಮಾಂಸ ಆಹಾರ, ಮೊಸರನ್ನುವನ್ನ ಜುಂಜಪ್ಪ, ಎತ್ತಪ್ಪ, ಕಾಟಮದೇವರು, ಕೇತೇದೇವರು ಈ ದೇವರಿಗೆ ಬಲಿಯನ್ನು ಕೊಡುವುದಿಲ್ಲ ಸಸ್ಯ ಆಹಾರವನ್ನು ಎಡೆ ಹಾಕುತ್ತಾರೆ.

"ಪಾಲು ಪಂಚೂದಡಿಗೆ  
ಸಕ್ಕರೆ ಭೋಜನದಡಿಗೆ ಹಾಲು  
ಪಾಯಿಸದಡಿಗೆ ಮೂರುಬಗೆ ಅಡಿಗೆ ಮಾಡಿ ಮುನ್ನೂರು  
ಅರವತ್ತು ಕೋಟಿ ಲಿಂಗನಿಗೂ  
ಒಂಬತ್ತು ಜನ ದೇವತೆಯರಿಗೂ ಎಡೆ ಮಾಡಬೇಕಮ್ಮ ಅಂದ

---

[26] ತೀನಂ. ಶಂಕರ ನಾರಾಯಣ, ಕಾಡುಗೊಲ್ಲರ ಸಂಪ್ರದಾಯ ಮತ್ತು ನಂಬಿಕೆಗಳು, ಪುಟ ಸಂಖ್ಯೆ 36.

ಪಿರಿಯಣ್ಣ"[27]

ಹೀಗೆ ಎಡೆ ಹಾಕುವುದನ್ನು ಜುಂಜಪ್ಪನೇ ಮಾಡುತ್ತಾನೆ. ಇದನ್ನು ಕಾಡುಗೊಲ್ಲರು ಮುಂದುರೆಸಿಕೊಂಡು ಬಂದಿರುವುದನ್ನು ಕಾಣಬಹುದು.

ಹರಕೆಗಳು ಮತ್ತು ವ್ರತಗಳು ಕಾಡುಗೊಲ್ಲರಲಿ ಅಲ್ಲದೆ ಇತರ ಜನರು ಸಹ ಹರಕೆಗಳನ್ನು ಮಾಡಿಕೊಳ್ಳುತ್ತಾರೆ. ಯಾರಿಗಾದರೂ ಹಾವು, ಚೇಳು, ವಂಡರಗಪ್ಪೆ ಕಚ್ಚಿದಾಗ ಚಿನ್ನದ ಬೆಳ್ಳಿಯ ಹಾವು, ಚೇಳು, ವಂಡರಗಪ್ಪೆಯನ್ನು ಮಾಡಿಸಿಕೊಡುತ್ತೇವೆ ಎಂದು ಹಾಗೆಯೇ ಒಂದು ಗಡಿಗೆ ಮೀಸಲು ಹಾಲನ್ನು ಅರ್ಪಿಸುತ್ತೇನೆ ಎಂದು, ಬೇವಿನ ಉಡುಗೆ ತೊಡುತ್ತೇನೆ ಎಂದು, ಹಸುವಿನ ಕರುವಿಗೆ ಉಸಾರಿಲ್ಲದೆ ಹೋದರೆ ಅದನ್ನು ಕಾಟುಮದೇವರಿಗೆ ಒಪ್ಪಿಸುವ ಹರಕೆ, ಕುರಿ ಮೇಕೆ ಬಲಿ ಕೊಡುವ ಹರಕೆ, ಪಾತೇದೇವರ ಜಾತ್ರೆ ನಡೆಸುವ ಹರಕೆ, ಉರುಳುಸೇವೆ ಹೀಗೆ ವಿವಿಧ ಹರಕೆಗಳನ್ನು ಮಾಡಿಕೊಳ್ಳುತ್ತಾರೆ.

ಇನ್ನೂ ವ್ರತಗಳು, ಕಾಡುಗೊಲ್ಲರಲ್ಲಿ ಒಂದು ವರ್ಗದವರು ಆಚರಿಸುವ ವ್ರತಗಳು ಉಂಟು, ಒಬ್ಬ ವ್ಯಕ್ತಿ ಆಚರಿಸುವ ವ್ರತಗಳು ಉಂಟು. ಇವರು ವ್ರತ ಎನ್ನುವುದಕ್ಕೆ 'ಬತ' ಎಂದು ಕರೆಯುತ್ತಾರೆ. ಇವರಲ್ಲಿ ಲವಣೆ ಬತ, ಹುರುಳಿ ಬತ, ಮತ್ತು ಹಾಲು ಮೀಸಲು ಬತ ಈ ಮೂರು ವ್ರತಗಳನ್ನು ಕಾಣಬಹುದು.

ಕಾಡುಗೊಲ್ಲರಿಗೆ ಹುತ್ತ, ದನಗಳ ಗೂಡಿನಲ್ಲಿ ಜುಂಜಪ್ಪ ಇರುತ್ತಾನೆಂದು ಗುಬ್ಬಗಳಲ್ಲಿ ವಿವಿಧ ದೇವರುಗಳು ವಾಸವಾಗಿದ್ದರೆಂದು ಪವಿತ್ರವಾದ ಸ್ಥಳಗಳು. ಹಾಗೆಯೇ ಸುರ ಹೊನ್ನೆಮರ, ಕಗ್ಗಲೀಮರ ಮತ್ತು ಬೇವಿನ ಮರಗಳನ್ನು ಪೂಜಿಸುತ್ತಾರೆ. ಹಾಲು ಹುಯ್ದು ಹುಣಸೆ ಮರವನ್ನು ಕಡಿಯದೆ ಅದನ್ನು ಪೂಜಿಸುತ್ತಾರೆ.

ಕಾಡುಗೊಲ್ಲರು ಒಂದು ನಿರ್ಧಿಷ್ಟವಾದ ಉದ್ದೇಶಕ್ಕಾಗಿ ಮೀಸಲಾಗಿ ಬಿಟ್ಟಿರುವ ಕುರಿಗೆ 'ಜೆನ್ನಿಗೆ ಕುರಿ' ಎನ್ನುತ್ತಾರೆ. ಇದು ಬಹಳ ಪವಿತ್ರ ಇದನ್ನು ಯಾರು ಮುಟ್ಟುವ ಹಾಗಿಲ್ಲ ಮುಟ್ಟಿದರೆ ಕಣ್ಣು ಹೋಗುತ್ತವೆ ಎಂಬ ನಂಬಿಕೆಯು ಇದೆ. ಇದರ ಹಾಲು ಪವಿತ್ರ ಸೂತಕ ಕಳೆಯುವ ಸಂದರ್ಭದಲ್ಲಿ ಈ ಕುರಿಯ ಹಾಲನ್ನು ಉಪಯೋಗಿಸುತ್ತಾರೆ.

---

[27] ಚಲುವರಾಜು, ಬುಡಕಟ್ಟು ಮಹಾಕಾವ್ಯ ಮಾಲೆ, ಜುಂಜಪ್ಪ, ಪುಟ ಸಂಖ್ಯೆ 497.

"ಏನಪ್ಪಾ

ಇದು ಜನಿಗೆ ಹೊಯ್ದಿಲ್ಲ ಮಗೂಗೆ ಸೂತಗ

ನಾವು ಕಾಡು ಗೊಲ್ಲರು

ಜನಿಗೆ ಹೊಯ್ದು ಸೂತಗ ಕಳೆದೆ"[28]

ಹೀಗೆ ಜನ್ನಿಗೆ ಕುರಿಯ ಹಾಲು ಕಾಡುಗೊಲ್ಲರ ಬದುಕಿನಲ್ಲಿ ಎಲ್ಲಾ ಸೂತಕದ ಸಂದರ್ಭದಲ್ಲಿರಯೂ ಮುಖ್ಯ ಪಾತ್ರ ವಹಿಸುತ್ತದೆ.

ಕಾಡುಗೊಲ್ಲರಲ್ಲಿ ಜನನ ಸಂಪ್ರದಾಯ ತುಂಬ ವಿಶಿಷ್ಠವಾದುದ್ದು. "ಕಾಡುಗೊಲ್ಲರಲ್ಲಿ ಮಗು ಹುಟ್ಟುವ ಸಂದರ್ಭದಲ್ಲಿ ಆಚರಿಸುವ ಸಂಪ್ರದಾಯ ತುಂಬ ಕಟ್ಟುನಿಟ್ಟಾಗಿದೆ".[29] ಜುಂಜಪ್ಪ ಸಿನ್ನಮ್ಮನಲ್ಲಿ ಹುಟ್ಟಿದಾಗ ಅವನು ಹೇಳಿದ್ದೆ ಇವರಲ್ಲಿ ನಿಯಮವಾಗಿ ಮುಂದುವರಿದುಕೊಂಡು ಬಂದು, ಇಂದು ಸಹ ಅದು ಮುಂದುವರಿದುಕೊಂಡು ಬಂದಿದೆ. ಬಸುರಿಗೆ ಹೆರಿಗೆ ನೋವು ಆರಂಭವಾದ ಕೂಡಲೇ ಹಟ್ಟಿಯಿಂದ ಹೊರಗೆ ದೂರದಲ್ಲಿ ಮೊದಲೇ ಕಟ್ಟಿದ್ದ ಅರ್ಧಗೋಳಾಕಾರದ ಗುಬ್ಬಕ್ಕೆ ಅವಳನ್ನು ಕರೆದುಕೊಂಡು ಬರುತ್ತಾರೆ. ಅವಳನ್ನು ಅಲ್ಲಿಯೆ, ಬಿಟ್ಟು ಊರಿಗೆ ಹೊರಡುತ್ತಾರೆ. ಹೆರಿಗೆಯಲ್ಲಿ ಸಹಾಯಕ್ಕೆ ಬೇಡ ಕುಲದ ಒಬ್ಬ ಸೂಲಗಿತ್ತಿಯನ್ನು ಮಾತ್ರ ಬಿಟ್ಟಿರುತ್ತಾನೆ. ಹೆರಿಗೆಯಾದ ಮೇಲೆ ಅವಳು ಹೊರಟು ಹೋಗುತ್ತಾಳೆ, ಹೆರಿಗೆಯಾದ ಹೆಂಗಸು ಮೂರು ತಿಂಗಳುಗಳ ಕಾಲ ಮಳೆ, ಬಿಸಿಲು ಚಳಿ ಎನ್ನದೆ ಅವಳು ಅಲ್ಲಿಯೇ ಇರಬೇಕಾಗುತ್ತದೆ. ಅವಳಿಗೆ ಆಹಾರ ಪದಾರ್ಥವನ್ನು ಅವಳೆ ತಯಾರಿಸಿಕೊಂಡು ತಿನ್ನಬೇಕು. ಅದಕ್ಕೆ ಬೇಕಾಗುವ ಸಾಮಾನುಗಳನ್ನು ಮಾತ್ರ ದೂರದಿಂದಲೇ ಗುಬ್ಬದೊಳಗೆ ನೂಕುತ್ತಾರೆ. ಹೆರಿಗೆಯಾದ ಎರಡನೇ ದಿನಕ್ಕೆ ಅಗಸರವಳನ್ನು ಕರೆಸಿ ಬಾಣಂತಿಯ ಸ್ವಲ್ಪ ದೂರದಲ್ಲಿ ನೆಲವನ್ನು ಸಗಣಿಯಿಂದ ಸಾರಿಸಿ ಅಲ್ಲಿಗೆ ಗುಬ್ಬವನ್ನು ಎತ್ತಿ ಹಿಡುತ್ತಾಳೆ. ಅಲ್ಲಿಗೆ ಬಾಣಂತಿ ಅಗಸರವಳು ತಂದು ಮಡಿ ಬಟ್ಟೆಯನ್ನು ಹಾಕಿಕೊಂಡು ಮಗುವಿನೊಡನೆ ಬೇರೆ ಗುಬ್ಬಕ್ಕೆ ಹೋಗುತ್ತಾಳೆ. ಅಲ್ಲಿಗೆ ಎರಡನೇ ದಿನದ ಹೊಲೆಯನ್ನು ಕಳೆಯುತ್ತಾರೆ. ಹೀಗೆ ಮೂರು ಐದನೆ, ಒಂಭತ್ತನೆ ದಿನ ಗುಬ್ಬವನ್ನು ಬೇರೆ ಬೇರೆ ಸ್ಥಳಗಳಿಗೆ ಬದಲಾಯಿಸಿ ಸೂತಕ ಕಳೆಯುತ್ತಾರೆ. ಒಂಭತ್ತನೆ ದಿನದ ಸೂತಕವನ್ನು ಕಳೆದ ಹದಿನೈದು ದಿನದವರೆಗೆ ಗುಬ್ಬವನ್ನು ಬದಲಾಯಿಸುವುದಿಲ್ಲ ಹದಿನೈದನೆ ದಿನಕ್ಕೆ ಮಡಿ ಬಟ್ಟೆಯನ್ನು ಹಾಕಿ ಗುಬ್ಬವನ್ನು ಬದಲಾಯಿಸಿ ಸೂತಕ ಕಳೆಯುತ್ತಾರೆ. ಇನ್ನೂ

[28] ಚಲುವರಾಜು, ಬುಡಕಟ್ಟು ಮಹಾಕಾವ್ಯ ಮಾಲೆ, ಜುಂಜಪ್ಪ, ಪುಟ ಸಂಖ್ಯೆ 78.

[29] ತೀನಂ. ಶಂಕರ ನಾರಾಯಣ, ಕಾಡುಗೊಲ್ಲರ ಸಂಪ್ರದಾಯ, ಪುಟ ಸಂಖ್ಯೆ 149.

ಮೂವತ್ತು ದಿನದ ತನಕ ಗುಬ್ಬವನ್ನು ಬದಲಾಯಿಸುವುದಿಲ್ಲ. ಮುವತ್ತನೆ ದಿನ ಮಡಿ ಬಟ್ಟೆಯನ್ನು ತೊಟ್ಟು ಗುಬ್ಬವನ್ನು ಬದಲಾಯಿಸುವುದರ ಮೂಲಕ ಒಂದು ತಿಂಗಳ ಸೂತಕ ಕಳೆಯುತ್ತಾರೆ. ಆ ಮೇಲೆ 2ನೇ ತಿಂಗಳ ಸೂತಕವನ್ನು ಹಿಂದಿನಂತೆ ಕಳೆಯುತ್ತಾರೆ. ಮೂರನೆಯ ದಿನ ತುಂಬಿದಾಗ ಇನ್ನೂಮ್ಮೆ ಸೂತಕವನ್ನು ಕಳೆಯುತ್ತಾರೆ. ಬಾಣಂತಿಯ ಗುಡಿಸಲನ್ನು ಹಟ್ಟಿಯಿಂದ ದೂರದಲ್ಲಿದ್ದ, ಬಾಣಂತಿ ಉಪಯೋಗಿಸುತ್ತಿದ್ದ ಮಡಿಕೆಯನ್ನು ಒಡೆದು ದೂರಕ್ಕೆ ಎಸೆಯುತ್ತಾರೆ. ನಂತರ ಬಾಣಂತಿ ತನ್ನ ಮಗುವಿನೊಡನೆ ಊರಿನ ಮೂಡಲ ಹುದಿಗೆ ಬರುತ್ತಾಳೆ. ಮಗುವಿನ ತಂದೆ ಜನ್ನಿಕುರಿಯ ಹಾಲನ್ನು ತಂದು ಅವರಿಬ್ಬರಿಗೆ ಕುಡಿಸುತ್ತಾನೆ. ಹೊರಜನ್ನಿಗೆ, ಒಳಜನ್ನಿಗೆ, ಕಿರುಜನ್ನಿಗೆ ಮುಗಿದ ಮೇಲೆ ಸೂತಕ ಕಳೆದು ಅವಳನ್ನು ಮಗುವನ್ನು ಮನೆಗೆ ಕರೆದುಕೊಳ್ಳುತ್ತಾರೆ.

"ಆವತ್ತ ಅವರಿಗೆ ಕಾಡಲ್ಲಿ ಮೆಟ್ಟಿಲ್ಲದೆ
ಕಿವಿಗೆ ಹತ್ತಿ ಇಕ್ಕೆಮದಕ್ಕೆ ಅವಕಾಶವಿಲ್ಲದೆ ಸೇರಿದ್ದಕ್ಕಾಗಿ
ನಮ್ಮ ಜನ ಗೊಲ್ದುರು
ಸರಿ ಈಗಲೂ ಕಾಲಿಗೆ ಮೆಟ್ಟಾಕಕಿಲ್ಲ
ಕವಿಗೆ ಹತ್ತಿ ಇಕ್ಕಕಿಲ್ಲ
ಬಾಣಂತೀರು ಜನಿಗೆ ಕುಳುದು
ಸೂತಗ ಕಳಕಂಬೊವರಗೂ
ಚಪ್ಪಲಿ ಆಕೆಮದಂಗೆ ಇರಬೇಕು"[30]

ಇದೆ, ಕಾಡುಗೊಲ್ಲರಲ್ಲ ಸಂಪ್ರದಾಯಾವಾಗಿ ಮುಂದುವರಿದುಕೊಂಡು ಬಂದಿರುವಂತೆ ಕಾಣುತ್ತದೆ.

ಹೆಣ್ಣು ಮಕ್ಕಳು ಮೈ ನೆರೆದಾಗ ಅವರನ್ನು ಹೆಂಗಸರು ಹಟ್ಟಿಯಿಂದ ಹೊರಗೆ ಕಳುಹಿಸುತ್ತಾರೆ. ದಿನ ಸ್ನಾನ ಮಾಡಿಸಿ ಅಗಸರವಳು ಕೊಟ್ಟ ಮಡಿ ಬಟ್ಟೆಯನ್ನು ಹಾಕಿಸುತ್ತಾರೆ. ಹೊಂಗೆ ಮತ್ತು ಬೇವಿನ ಸೊಪ್ಪಿನ ಚಪ್ಪರ ಕಟ್ಟಿ ಅದರಲ್ಲಿ ಆ ಹುಡುಗಿಯನ್ನು ಬಿಡುತ್ತಾರೆ. ಆ ಹುಡುಗಿ ರಾತ್ರಿಯೆಲ್ಲಾ ಜಾಗರಣೆ ಇರಬೇಕು. ಅದಕೊಸ್ಕರ ಅವಳೊಡನೆ ಒಬ್ಬಳನ್ನು

[30] ಚಲುವರಾಜು, ಬುಡಕಟ್ಟು ಮಹಾಕಾವ್ಯ ಮಾಲೆ, ಜುಂಜಪ್ಪ, ಪುಟ ಸಂಖ್ಯೆ 66

ಮಾತನಾಡಲು ಬಿಟ್ಟಿರುತ್ತಾರೆ. ಮೂರು, ನಾಲ್ಕು ಜನ ಹೆಂಗಸರು ಒಸುಗೆಯ ಹಾಡುಗಳನ್ನು ಹಾಡುತ್ತಾರೆ. ಅವಳಿಗೆ ಉತ್ತುತ್ತೆ, ದ್ರಾಕ್ಷಿ, ಬಾಳೆಹಣ್ಣು, ಕೊಬ್ಬರಿ, ಕಡಲೆ ಹೂವು ಹಣ್ಣು ಇವುಗಳಿಂದ ಮಡಿಲನ್ನು ತುಂಬುತ್ತಾರೆ. ಅವಳಿಗೆ ಪಾಯಸದ ಊಟ ಬಡಿಸುತ್ತಾರೆ. ಮೂರನೇ ದಿನ ಚಪ್ಪರವನ್ನು ಜಾಗವನ್ನು ಬದಲಾಯಿಸುತ್ತಾರೆ. ಐದು ದಿನಗಳಲ್ಲಿಯು ಮೊದಲನೆಯ ದಿನದ ರೀತಿಯಲ್ಲಿ ಶಾಸ್ತ್ರಗಳನ್ನು ಮಾಡುತ್ತಾರೆ. ಆರನೇ ದಿನ ಊರಿನಿಂದ ಹೊರಗೆ ಮುಟ್ಟಾದ ಹೆಂಗಸರೆ ಉಳಿದುಕೊಳ್ಳುವ ಜಾಗ 'ಮಂದೆ' ಯಲ್ಲಿ ಬಿಡುತ್ತಾರೆ. ಇಲ್ಲಿ ಅವಳು ಏಳು ದಿನಗಳ ಕಾಲ ವಾಸ ಮಾಡುತ್ತಾಳೆ. ಹದಿಮೂರನೆಯ ದಿನ ಅವಳು ಮಂದೆಯಿಂದ ಹೊರಗೆ ಬರುತ್ತಾಳೆ. ಅಂದು ಅವಳನ್ನು ಊರಿನ ಮೂಡಲ ಹುದಿಯ ಸಮೀಪದಲ್ಲಿ ಕೂರಿಸಿ, ಅವಳಿಗೆ ನೀರು ಮಡಿ ಬಟ್ಟೆ ಹಾಕಿ ಅಲ್ಲಿ ಅವಳಿಗೆ ಹಸಿರು ಚಪ್ಪರವನ್ನು ಹಾಕಿಕೊಡುತ್ತಾರೆ. ಅಲ್ಲಿ ಅವಳು ಒಂಭತ್ತು ದಿನಗಳ ಕಾಲ, ಅಲ್ಲಿದ್ದು ಇಪ್ಪತ್ತೊಂದು ದಿನ ಕಳೆದ ಮೇಲೆ ಇಪ್ಪತ್ತೆರಡನೆ ದಿನ ನೀರು ಹಾಕಿ ಮಡಿ ಬಟ್ಟೆ ಹಾಕಿ ಅವಳನ್ನು ಮನೆಗೆ ಕರೆದುಕೊಳ್ಳುತ್ತಾರೆ. ಆ ದಿನ ಅವಳ ಮನೆಯಲ್ಲಿ ಪಾಯಸ ಮಾಡಿ ಊಟ ಮಾಡುತ್ತಾರೆ.

ಕಾಡುಗೊಲ್ಲರಲ್ಲಿ ದೇವರ ಪೂಜಾರಿಯ ನೇಮಕವು ಒಂದು ನಿಯಮದಂತೆ ನಡೆಯಬೇಕು.

"ಅಯ್ಯಾ

ಗೋವರ್ಧನ ಗಿರಿ ಮಹಾರಾಜ

ನಮಗೆ ಪೂಜೆ ಮಾಡದಕ್ಕೆ ಪೂಜಾರಪ್ಪಿಲ್ಲ

ಅಂತ ಶ್ರೇಷ್ಠವಾದ ಮಕ್ಕಳಾರೂ ಇಲ್ಲ.

ನಿನ್ನ ಮನೆವೊಳಗೆ ಸಿಕ್ಕುಮುತ್ತಿ ಸಮುಕ್ತಿ

ಹಸುವಿನ ಕರುವಿನ ಹೊಟ್ಟೆಯೊಳಗೆ' ಹುಟ್ಟಿರಲ್ಲಾ

ಅವರೇ ಶ್ರೇಷ್ಠವಾದ ಮಕ್ಕಳು"[31]

ಹೀಗೆ ಜುಂಜಪ್ಪನ ಕಾವ್ಯದಲ್ಲಿ ಶ್ರೇಷ್ಠರಾದ ಮಕ್ಕಳು ಮಾತ್ರ ಪೂಜಾರಿಗಳಾಗಬೇಕು. ಎಂಬುದಿದೆ. ಪೂಜಾರಿ ಪೂಜೆ ಮಾಡಲು ನಿಶಕ್ತನಾದಾಗ, ಅಥವಾ ಅವನು ಸತ್ತು ಹೋದಾಗ

---

[31] ಚಲುವರಾಜು, ಬುಡಕಟ್ಟು ಮಹಾಕಾವ್ಯ ಮಾಲೆ, ಜುಂಜಪ್ಪ, ಪುಟ ಸಂಖ್ಯೆ 33.

ಅವನ ಮನೆತನದಲ್ಲಿ ಹುಟ್ಟಿದ ವ್ಯಕ್ತಿಗೆ, ಪೂಜಾರಿ ಜವಬ್ದಾರಿ ಬರುತ್ತದೆ. ಹಿರಿಯ ಮಗ ಮದುವೆಯಾಗದೆ ಇದ್ದರೆ ಅವನನ್ನು, ಮದುವೆಯಾಗಿದ್ದರೆ ಅವನ ಮುಂದಿನವರಿಗೆ ಪೂಜಾರಿ ಪಟ್ಟಕ್ಕೆ ಆಯ್ಕೆ ಮಾಡುತ್ತಾರೆ. ಪೂಜಾರಿಗೆ ಗಂಡು ಮಕ್ಕಳಿಲ್ಲದಿದ್ದರೆ ಆ ವಂಶದ ಅವಿವಾಹಿತರಲ್ಲಿ ಯಾರನ್ನಾದರು ಆಯ್ಕೆ ಮಾಡುಬಹುದು. ಪೂಜಾರಿಯಾಗಿ ಆಯ್ಕೆ ಮಾಡಲು ಅವನು ಅವಿವಾಹಿತನಾಗಿಯೇ ಇರಬೇಕು ಎಂಬ ನಿಯಮವಿದೆ. ಪೂಜಾರಿ ಪಟ್ಟವಾದ ನಂತರ ಮದುವೆಯಾಗಬಹುದು. ಪೂಜಾರಿಯನ್ನು ಆಯ್ಕೆ ಮಾಡಿದ ಮೇಲೆ ದೇವರನ್ನು ಹಳ್ಳಕ್ಕೆ ತೆಗೆದುಕೊಂಡು ಗಂಗಾಸ್ನಾನ ಮಾಡಿಸಿ ಹಿಂದಕ್ಕೆ ತರುತ್ತಾರೆ. ಜಾಂಡೆವುಕಟ್ಟಿ ಆತನ ತಲೆಯ ಮೇಲೆ ತಂಬಿಯ ತುಂಬ ಹಾಲನ್ನು ತುಂಬಿ ತಲೆಯ ಮೇಲೆ ಹೊರಿಸಿಕೊಂಡು ಹೋಗುತ್ತಾರೆ. ಅವನು ದೇವರು ಸೂಚಿಸಿದ ಹುಣಸೆಮರಕ್ಕೆ ಹಾಲನ್ನು ಹಾಕುತ್ತಾನೆ. ಅದು ಪವಿತ್ರ ಮರವಾಗುತ್ತದೆ. ಅದನ್ನು ಯಾರು ಕಡಿಯುವ ಹಾಗಿಲ್ಲ. ನಂತರ ಹಳೆಯ ಪೂಜಾರಿ ಹೊಸ ಪೂಜಾರಿಗೆ ಹೂ ಹಾರ ಹಾಕುತ್ತಾನೆ. ಹಳೆಯ ಪೂಜಾರಿ ಬದುಕಿಲ್ಲದಿದ್ದರೆ, ಅವರಲ್ಲಿ ಯಜಮಾನರಾದ ಯಾರಾದರೂ ಹೊಸ ಪೂಜಾರಿಗೆ ಹಾರ ಹಾಕುತ್ತಾರೆ. ಆ ಮೇಲೆ ಅವನು ದೇವರಿಗೆ ಪೂಜೆ ಮಾಡಿ ತೀರ್ಥ, ಪ್ರಸಾದವನ್ನು ಎಲ್ಲರಿಗೂ ಹಂಚುತ್ತಾನೆ.

ಕಾಡುಗೊಲ್ಲರಲ್ಲಿ ಮದುವೆಯು ತುಂಬಾ ಸರಳವಾಗಿ ನಡೆಯುತ್ತದೆ. ಹಿಂದೆ ಅನೇಕ ಬುಡಕಟ್ಟುಗಳ ರೀತಿಯಲ್ಲಿ ಗಂಡು ತನಗೆ ಬೇಕಾದ ಹೆಣ್ಣನ್ನು ಅಪಹರಿಸಿಕೊಂಡು ಹೋಗಿ ಮದುವೆ ಮಾಡಿಕೊಳ್ಳುವ ಪದ್ದತಿ ಇತ್ತು ಎಂದು ಹಲವಾರು ಆಧಾರಗಳ ಮೂಲಕ ತಿಳಿದು ಬರುತ್ತದೆ. ಇತ್ತೀಚಿಗೆ ಇತರ ಜಾತಿಗಳ ರೀತಿಯಲ್ಲಿ ಸಂಕೀರ್ಣವಾದ ವಿವಾಹ ಪದ್ದತಿ ರೂಢಿಗೆ ಬಂದಿದೆ. ಸಾಂಪ್ರಾದಾಯಿಕವಾದ ವಿವಾಹ ಐದು ದಿನಗಳ ಕಾಲ ನಡೆಯುತ್ತದೆ. ಇವರು ಮದುವೆ ಮಾಡಲು ವಾರ, ತಿಥಿ, ನಕ್ಷತ್ರ ಯಾವುದನ್ನು ನೋಡುವುದಿಲ್ಲ. ಹೆಣ್ಣು ಇಂತವರ ಮನೆಯಲ್ಲಿ ಇದೆ ಎಂದು ಗೊತ್ತಾದ ಮೇಲೆ ಗಂಡಿನ ಮನೆಯವರು ಹೆಣ್ಣಿನ ಮನೆಗೆ ಹೆಣ್ಣು ನೋಡಲು ಹೋಗುತ್ತಾರೆ. ಐದು ಜನ ಗಂಡಸರು ಅವರ ಜೊತೆ, ಬಿಳಿಯ ಸೀರೆಯನ್ನು ಹುಟ್ಟಿಕೊಮಡು ಕೈಗೆ ಕಡಗ ಹಾಕಿ, ಸುಣ್ಣದಿಂದ ಚಿತ್ತಾರ ಬಿಡಿಸಿದ ಮಡಿಕೆಯನ್ನು ಹೊತ್ತುಕೊಂಡು ಅಕ್ಕಿ, ವೀಳ್ಯೆಯದಲೆ, ಬಾಳೆಹಣ್ಣು ಇವುಗಳನ್ನು ಕಟ್ಟಿದ ಬಿಳಿಯ ಬಟ್ಟೆಯ ಗಂಟನ್ನು ತೆಗೆದುಕೊಂಡು, ಸಂಜೆಯ ವೇಳೆಯಲ್ಲಿ ಬರುತ್ತಾರೆ. ಬರುವಾಗ ಅವರ ಸಂಪ್ರದಾಯದ ರೀತಿಯಲ್ಲಿ ಯಾವುದೇ ಅಪಶಕುನಗಳು ಹಾಗಬಾರದು ಹೆಣ್ಣಿನ ಮನೆಗೆ ಬರುತ್ತಾರೆ. ಬಂದವರು ಮೊದಲು ಹೆಣ್ಣಿನ ಮನೆಯ ದೀಪಕ್ಕೆ ಎಣ್ಣೆ ಹಾಕಿ ಪೂಜೆ ಮಾಡಿ ಅಡ್ಡಬಿದ್ದು ರಾತ್ರಿಯಲ್ಲಿ ಅದು

ಸರಿಯಾಗಿ ಉರಿದರೆ ಆ ಸಂಬಂಧ ಸರಿಯಾದುದು ಎಂದು ಅವರ ಅನಿಸಿಕೆ. ಯಾವುದೇ ಅಪಶಕುನಗಳು ನಡೆಯದೆ ಹೋದಾಗ ಹೆಣ್ಣನ್ನು ಸಹ ಪರೀಕ್ಷೆ ಮಾಡುತ್ತಾರೆ. ಸರಿಯಾದಾಗ ಗಂಡಿನ ಮನೆಯವರು ಒಪ್ಪಿಗೆ ಸೂಚಿಸಿದ ಮೇಲೆ ಹೆಣ್ಣಿನ ಮನೆಯವರು ಸಹ ಗಂಡಿನ ಮನೆಗೆ ಒಬ್ಬ ಗರತಿಯನ್ನು ಅವಳು ಬಿಳಿಯ ಸೀರೆ, ಕೈ ಕಡಗ, ತಲೆಯ ಮೇಲೆ ಸುಣ್ಣದ ಚಿತ್ತಾರದ ಮಡಿಕೆಯನ್ನು ಹೊತ್ತುಕೊಂಡು ಐದು ಜನ ಗಂಡಸರ ಜೊತೆಗೂಡಿ ಹೋಗುತ್ತಾರೆ. ಯಾವುದೇ ರೀತಿಯ ಅಪಶಕುನಗಳು ಸಂಭವಿಸದೆ ಹೋದಾಗ ಅವರು ಸಹ ಗಂಡಿನ ಮನೆಯ ಹಣತೆಗೆ ಎಣ್ಣೆಯನ್ನು ಹಾಕಿ ಪೂಜೆ ಮಾಡುತ್ತಾರೆ. ದೀಪ ರಾತ್ರಿ ಸರಿಯಾಗಿ ಉರಿದರೆ ಈ ಸಂಬಂಧವು ಸರಿಯಾಗುತ್ತದೆ ಎಂದು ಮದುವೆ ನಿಶ್ಚಯವಾಗುತ್ತದೆ.

ಮದುವೆ ನಿಶ್ಚಯವಾದ ಮೇಲೆ ಅರುಣೆ ತರುವ ಶಾಸ್ತ್ರವು ಮುಖ್ಯವಾದುದು ಇದನ್ನು ಅರಿವೇಣಿ ಎಂದು ಕರೆಯುತ್ತಾರೆ. ಇದರ ಶಾಸ್ತ್ರ ಕಾಡುಗೊಲ್ಲರಲ್ಲಿ ತುಂಬಾ ಮುಖ್ಯವಾದುದು. ಅರುಣೆ ತರುವುದು ಎಂದರೆ ಒಂದು ಹೆಡಿಗೆಗೆ ಮೂರು ಸೇರು ಇನ್ನೊಂದಕ್ಕೆ ಐದು ಸೇರು ಅಕ್ಕಿ ನುಚ್ಚನ್ನು ಹಾಕಿ ಒಂದು ಹೆಡಿಗೆಗೆ ಒಂದು ಕಟ್ಟು ವೀಳ್ಯೆಯದೆಲೆ, ಎರಡು ಹಿಡಿ ಅಡಿಕೆ ಒಂಭತ್ತು ಅಚ್ಚು ಬೆಲ್ಲ, ಒಂಭತ್ತು ಬೆಳ್ಳುಳ್ಳಿ, ಒಂಭತ್ತು ಅರಶಿನ ಕೊನೆ, ಒಂಭತ್ತು ಗಣಿಗಳ ಎಲೆಯನ್ನು ಸುತ್ತ ಮಾಡಿದ ಎಲೆಯ ಗಂಟನ್ನು ಇವುಗಳನ್ನು ಹಾಕುತ್ತಾರೆ. ಒಂದು ಸೇರು ಬೇಳೆ ಕಾಳು, ಒಂದು ತೆಂಗಿನಕಾಯಿ, ಒಂದು ಕುಡಿಕೆಗೆ ಎಣ್ಣೆಯನ್ನು ತುಂಬಿ ಹೆಡಿಗೆಯಲ್ಲಿಡುತ್ತಾರೆ. ಐದುಜನ ಮುತ್ತೈದೆಯರನ್ನು ಒಂದೆಡೆ ಕೂರಿಸಿ ಅವರಿಗೆ ವೀಳ್ಯೆದೆಲೆ ಶಾಸ್ತ್ರ ಮಾಡಿ ಇಬ್ಬರ ಕೈಯಲ್ಲಿ ಹೆಡಿಗೆಯನ್ನು ಹೊರಿಸುತ್ತಾರೆ. ಇನ್ನುಳಿದವರು ಕೆಳಗೆ ಪಂಚಾರತಿಯನ್ನು ಹಿಡಿದು ಕುಂಬಾರರ ಮನೆಗೆ ಹೋಗುತ್ತಾರೆ. ಅಲ್ಲಿ ಹೆಡಿಗೆ ಇದ್ದ ಗುಂಡುಕಲ್ಲಿಗೆ ಪೂಜೆ ಮಾಡಿ ಅವರು ಕೊಟ್ಟ ಐದು ಮಡಿಕೆಗಳನ್ನು ಪೂಜಿಸಿ ಅವುಗಳನ್ನು ತೆಗೆದುಕೊಮಡು ಬರುವ ವೇಳೆಗೆ ಅವುಗಳನ್ನು ಪೂಜಿಸುವುದಕ್ಕಾಗಿ ಬಾಳೆಪಟ್ಟೆಯಿಂದ ಅರುಣೆಗುಡ್ಲು ಹಾಕರುತ್ತಾರೆ. ಅದರೊಳಗೆ ಮಡಿಕೆಗಳನ್ನು ಇಟ್ಟು ಅದರಲ್ಲಿ ಒಂದಕ್ಕೆ ಸುಣ್ಣದಿಂದ ಬಳಿದು ತೊಂಡೆ ಹಣ್ಣಿನ ರಸದಿಂದ ಬಣ್ಣ ತಯಾರಿಸಿ, ಹಸಿರು, ಕೆಂಪು ಬಣ್ಣಗಳಿಂದ ಮಡಿಕೆಯ ಸುತ್ತ ಅಡ್ಡೆ, ಉದ್ದವಾಗಿ ಗೆರೆ ಎಳೆದು, ಅದಕ್ಕೆ ಉತ್ತುತ್ತೆಕಾಯಿ, ಐದು ಅರಿಶಿನದ ಕೊನೆ, ಐದು ಬೆಲ್ಲದಚ್ಚು, ಐದು ಬೆಳ್ಳುಳ್ಳಿ ಐದು ತೊಂಡಲು, ಐದು ಕೊಬ್ಬರಿ ಬಟ್ಟಲು ಇವೆಲ್ಲವನ್ನು ಹಾಕಿ ಅದರ ಮೇಲೆ ಅಕ್ಕಿಯನ್ನು ಮಡಿಕೆ ತುಂಬ ತುಂಬುತ್ತಾರೆ. ಒಂದು ಮಿಳ್ಳೆಯಲ್ಲಿ ಎಣ್ಣೆಯನ್ನು ಹಾಕಿ ಅದನ್ನು ಅಕ್ಕಿಯ ಮೇಲಿಟ್ಟು ಮಡಿಕೆ ಬಾಯನ್ನು ಬಿಳಿಯ ಬಟ್ಟೆಯಿಂದ ಕಟ್ಟುತ್ತಾರೆ. ಇದನ್ನು 'ಅರುಣೆ' ಎಂದು ಕರೆಯುತ್ತಾರೆ. ಇದು

ಬಹಳ ಶ್ರೇಷ್ಠ ಇದನ್ನು ಅದಕ್ಕೆ ಯಾವುದೇ ರೀತಿಯ ಮೈಲಿಗೆ ಆಗಬಾರದು ಎಂದು ಅದನ್ನು ಒಬ್ಬ ಅಜ್ಜಿ ಕಾಯುತ್ತಿರುತ್ತಾಳೆ.

ಚಪ್ಪರಕ್ಕೆ ಕೊನೆ ತರುವುದಕ್ಕೂ ಶಾಸ್ತ್ರವನ್ನು ಮಾಡಿ ಕಡಿದು ತಂದು ದೊಡ್ಡ ಚಪ್ಪರದ ಕೆಳಗೆ ಗಂಡಿಗೊಂದು ಹೆಣ್ಣಿಗೊಂದು ಚಿಕ್ಕಚಪ್ಪರ ಹಾಕುತ್ತಾರೆ.

ಇದಾದ ಮೇಲೆ ಎರಡನೆಯ ದಿನ ಮದಲಿಂಗನ ಶಾಸ್ತ್ರ ಮಾಡುತ್ತಾರೆ. ಗಂಡನ್ನು ಹೆಣ್ಣಿನ ಮನೆಗೆ ವಾದ್ಯ ಸಮೇತ ಕರೆ ತರುತ್ತಾರೆ. ನಂತರ ಗಂಡನ್ನು ದೇವಸ್ಥಾನದ ಹತ್ತಿರ ಕರೆದುಕೊಂಡು ವಾದ್ಯ ಸಮೇತ ಹೋಗಿ ಅಲ್ಲಿ ಗಂಡಿನ ತಲೆಗೆ ಪೂಜಾರಿ ಮೊದಲು ಹಾಲನ್ನು ಒತ್ತುತ್ತಾನೆ. ಆ ಮೇಲೆ ಎಲ್ಲರು ಗಂಡಿಗೆ ಹಾಲನ್ನು ಒತ್ತುತ್ತಾರೆ. ಹೆಣ್ಣಿಗೂ ಅವಳ ಮನೆಯಲ್ಲಿ ಈ ರೀತಿ ಮಾಡಿ, ಮದುವೆ ಹೆಣ್ಣನ್ನು ಸಿದ್ದಗೊಳಿಸಿ, ಅನೇಕಾರು ಶಾಸ್ತ್ರ ಮಾಡುತ್ತಾರೆ, ಹಸೆಯ ಮೇಲೆ ಕೂರಿಸಿಯು ಸಹ ಅನೇಕಾರು ಶಾಸ್ತ್ರ ಮಾಡುತ್ತಾರೆ. ಗಂಡಿಗೂ ಅದೇ ರೀತಿ ಮಾಡುತ್ತಾರೆ.



ಮದಲಿಂಗನ ಶಾಸ್ತ್ರದ ನಂತರದ ಎರಡು ದಿನ ಹಸೆ ಹಾಡುಗಳಿಂದ ಕಾಲ ತಳ್ಳುತ್ತಾರೆ. ಐದನೆಯ ದಿನ ಬಿಡದಿ ಮನೆಯಲ್ಲಿ ಗಂಡಿಗೆ, ಹೆಣ್ಣಿನ ಮನೆಯಲ್ಲಿ ಹೆಣ್ಣಿಗೆ ಅರಿಶಿನ ಎಣ್ಣೆ ಹಚ್ಚಿ ನೀರು ಹಾಕಿ ಹೆಣ್ಣಿಗೆ ಬಿಳಿಯ ಸೀರೆಯನ್ನು, ಗಂಡಿಗೆ ಬಿಳಿಯ ಬಟ್ಟೆಯನ್ನು ತೊಡಿಸುತ್ತಾರೆ. ಹೆಣ್ಣಿನ ಮನೆಯಿಂದ ಹೆಣ್ಣನ್ನು, ಬಿಡದಿಯಿಂದಲೂ ಕರೆದುಕೊಂಡು ಬಂದು ಚಪ್ಪರದಲ್ಲಿ ಗಂಡನ್ನು ಕೂರಿಸುತ್ತಾರೆ. ಅರುಣೆ ಗುಡಿಗೆ ಕರೆದುಕೊಂಡು ಹೋಗುತ್ತಾರೆ. ಅರುಣೆಗೆ ಪೂಜೆ ಮಾಡಿ ಅದನ್ನು ತಲೆಯ ಮೇಲೆ ಹೊತ್ತುಕೊಂಡು ಹೆಣ್ಣಿನ ಚಪ್ಪರಕ್ಕೆ ತಂದು ಬಿಡುತ್ತಾರೆ. ಹೆಣ್ಣನ್ನು ಹೆಣ್ಣಿನ ಚಪ್ಪರದಲ್ಲಿ ಕೂರಿಸುತ್ತಾರೆ, ಗಂಡಿಗೆ ನಾಲ್ಕು ಹಸೆಯನ್ನು ಹೆಣ್ಣಿಗೆ ಮೂರು ಹಸೆ ಹಚ್ಚುತ್ತಾರೆ. ಹೆಣ್ಣಿನ ಚಪ್ಪರದ ನಾಲ್ಕು ಮೂಲೆಗೆ ಇಟ್ಟಿರುವ ಗಡಿಗೆಗಳ ಮಧ್ಯೆ ಒಂದು ಗುಂಡಿ ಮಾಡಿ ಅದಕ್ಕೆ ಕುರಿಗೊಬ್ಬರ ಹಾಕಿ ಅದರ ಮೇಲೆ ಅರಣೆಯನ್ನಿಡುತ್ತಾರೆ. ನಾಲ್ಕು ಗಡಿಗೆಗಳ ಸುತ್ತಲೂ ಬರುವಂತೆ ಅಂಗುದಾರ ಸುತ್ತಿ ದಾರದ ಒಂದೊಂದು ಎಳೆಯು ನಾಲ್ಕು ಗಡಿಗೆಗೆ ತಾಕುವಂತಿರಬೇಕು. ಐದು ಎಳೆಗಳನ್ನು ಸುತ್ತಿದಾರದ ಹಸೆಯನ್ನು ಬರೆಯುತ್ತಾರೆ. ಹೆಣ್ಣನ್ನು ಧಾರೆಯ ಹಸೆಗೆ ಕೂರಿಸಿ ಅವಳ ತಲೆಗೆ ಬಂಧುಬಳಗದವರೆಲ್ಲರೂ ಹಾಲುನ್ನೆರೆಯುತ್ತಾರೆ. ಗಂಡನ ಹೆಣ್ಣಿನ ಪಕ್ಕದಲ್ಲಿ ಕೂರಿಸಿ ಇಬ್ಬರಿಗೂ ಬೀರಕ್ಕಿ ಹಾಕುತ್ತಾರೆ. ಹಾಗೆಯೇ ಹೆಣ್ಣಿನವರು ಗಂಡಿನವರ ಮೇಲೆಯು ಗಂಡಿನವರು ಹೆಣ್ಣಿನವರ ಮೇಲೆಯೂ ಬೀರಕ್ಕಿಯನ್ನು ಎಸೆಯುತ್ತಾರೆ. ಆ ಮೇಲೆ ಬಾಳೆ ನಾರಿನ ಚೆಂಡನ್ನು ಕಟ್ಟಿ ಗಂಡು ಹೆಣ್ಣನ್ನು ಬಿಟ್ಟು ಅವರ ಬಂಧುಬಳಗದವರು

ಚೆಂಡಾಟ ಆಡುತ್ತಾರೆ. ಇದಾದ ನಂತರ ಪೂಜಾರಿ, ಗೌಡ ಮತ್ತು ಇತರ ಹಿರಿಯರು ಧಾರಗೆ ಅಪ್ಪಣೆ ಕೊಡಬೇಕು. ಇದಾದ ಮೇಲೆ ಧಾರೆಗೆ ನಿಲ್ಲಿಸಿ ಗಂಡಿನ ಕೈಯಿಗೆ ಹಾಲು ನೀರನ್ನು ಹಾಕುತ್ತಾರೆ. ಅದನ್ನು ಹೆಣ್ಣಿನ ಕೈಗೆ ಹಾಕಿಸುತ್ತಾರೆ. ಹಾಗೆಯೇ ಹೆಣ್ಣಿನ ಕೈಯಿಂದ ಮಾಡಿಸುತ್ತಾರೆ. ಇದಾದ ಮೇಲೆ ಇನ್ನೂ ಅನೇಕಾರು ಶಾಸ್ತ್ರಗಳನ್ನು ಮಾಡಿ ಗಂಡು ಹೆಣ್ಣಿಗೆ ತಾಳಿ ಕಟ್ಟುತ್ತಾನೆ.

ಧಾರೆಯಾದ ನಂತರ ಗಂಡು ಹೆಣ್ಣನ್ನು ಎದುರು ಬದುರು ಕೂರಿಸಿ ಅವರ ನಡುವೆ ಯಾರಾದರೂ ಒಬ್ಬ ಹೆಂಗಸು ಬಂದು ಹರಿವಾಣದಲ್ಲಿ ಅಕ್ಕಿ ತುಂಬಿ ನಿಲ್ಲುತ್ತಾಳೆ ಹೆಣ್ಣಿಗೂ ಗಂಡಿನ ಪ್ರಶ್ನೆ ಕೇಳಿ ಉತ್ತರ ಪಡೆಯುತ್ತಾ ಸೋಬಾನವನ್ನು ಹೇಳಿಕೊಂಡು ಅಕ್ಕಿಯನ್ನು ಅವರ ತಲೆಯ ಮೇಲೆ ಹಾಕಿಸುತ್ತಾರೆ. ಇದನ್ನು ಓದೋ ಅಕ್ಕಿ ಶಾಸ್ತ್ರ ಎನ್ನುತ್ತಾರೆ.

ಇದಾದ ಮೇಲೆ ಬೂವ ತೀರಿಸುವ ಶಾಸ್ತ್ರ ಇದರಲ್ಲಿ ಹೆಣ್ಣು ಗಂಡು ಎರಡನೂ ಗಂಡಿನ ಚಪ್ಪರದಲ್ಲಿ ಕೂರಿಸುತ್ತಾರೆ. ಒಂದು ಕಣದಲ್ಲೊ ಕುರಿ ಹಟ್ಟಿಯಲ್ಲೊ ತಂಗಡೆ ಸೊಪ್ಪನ್ನು ಹಾಕಿ ಅದರ ಮೇಲೆ ಹೊಸ ಮೊರವನ್ನು ಇಟ್ಟು ಬೂವಕ್ಕೆ ಹತ್ತು ಸೇರು ಅಕ್ಕಿ ಐದು ಹಚ್ಚು ಬೆಲ್ಲ, ಐದು ಬೆಳ್ಳುಳ್ಳಿ, ಪಾವು ತುಪ್ಪ, ಜೇನುತುಪ್ಪ, ತೆಂಗಿನಕಾಯಿ ಬೂವಕ್ಕೆ ಮುದ್ದೆ ತಯಾರಿಸಲು ವ್ಯಕ್ತಿಯ ಕೈಗೆ ಕೊಡುತ್ತಾರೆ. ಇವನ್ನು ಚಪ್ಪರದ ಮುಂಭಾಗದಲ್ಲಿ ಅನ್ನ ಮಾಡುತ್ತಾರೆ. ಅಗಸರ ಮನೆಯ ಮಡಿಯನ್ನು ಹಾಸಿ ಅದಕ್ಕೆ ಅನ್ನ, ಕಾಯಿತುರಿ, ಜೇನುತುಪ್ಪ, ಬೆಳ್ಳುಳ್ಳಿ ಹಾಕಿ ಅನ್ನವನ್ನು ಚೆನ್ನಾಗಿ ಮೇಣದಂತೆ ಮಿದ್ದಿ ಆರು ಉಂಡೆಗಳನ್ನು ಕಟ್ಟುತ್ತಾನೆ. ಎರಡು ಮುದ್ದೆ ಬೂವದ ಮುದ್ದೆ ಈ ಮುದ್ದೆ ತಿನ್ನುವವರಿಗೆ ತುಪ್ಪ ಮತ್ತು ಬೆಲ್ಲದ ಪಾಕವನ್ನು ಮಾಡಿ ಹಾಕುತ್ತಾರೆ. ಎರಡನೇದು ತಾಯಿ ಮುದ್ದೆ ಎಂದು, ಇನ್ನೆರಡು ಗೌಡ ಮುದ್ದೆ ಎಂದು ಕರೆಯುತ್ತಾರೆ. ಗಂಡು ಹೆಣ್ಣನ್ನು ಕೂರಿಸಿ ಎರಡು ತಾಯಿ ಮುದ್ದೆಗಳನ್ನು ಅವರ ಕೈಯಲ್ಲಿ ಮುಟ್ಟಿಸಿ ಗಂಡಿನ ಕಡೆಯವರಿಗೆ ಕೊಡುತ್ತಾರೆ. ಇನ್ನೆರಡು ಬೂವದ ಮುದ್ದೆಯನ್ನು ಗಂಡು ಹೆಣ್ಣಿನ ಕೈಯಲ್ಲಿ ಮುಟ್ಟಿಸಿ ಹೆಣ್ಣಿನ ಕಡೆಯವರಿಗೆ ಕೊಡುತ್ತಾರೆ. ಇವರುಗಳು ಅದನ್ನು ದೂರಕ್ಕೆ ತೆಗೆದುಕೊಂಡು ಹೋಗಿ ಮರೆಯಲ್ಲಿ ಊಟ ಮಾಡಬಹುದು. ಹಾಗೆಯೇ ಇನ್ನೆರಡು ಗೌಡ ಮುದ್ದೆ ಗೌಡನ ಬೆಳ್ಳಿಯ ಉಂಗುರದ ಮೊಹರನ್ನು ಹಾಕಿರುತ್ತಾನೆ. ಈ ಮುದ್ದೆಯನ್ನು ಬಹಳ ಎಚ್ಚರಿಕೆಯಿಂದ ಮಾಡಬೇಕು. ಸ್ವಲ್ಪವು ಬಿರುಕು ಬಿಟ್ಟಿರಬಾರದು. ಗೌಡ ವೀಳ್ಯದಲೆಯನ್ನು ತೆಗೆದುಕೊಂಡು ಆ ಮುದ್ದೆಯನ್ನು ಸವರುತ್ತಾನೆ. ಆಗ ಏನಾದರು ಬಿರುಕು ಕಾಣಿಸಿಕೊಂಡರೆ ಮುದ್ದೆ ಮಾಡಿದವನು ಮೂರು ಹಣ ದಂಡ ಕೊಡಬೇಕಾಗುತ್ತದೆ. ಈ ಮುದ್ದೆಯನ್ನು ವಾದ್ಯ ಸಮೇತ ಹಟ್ಟಿಯ ದೇವಸ್ಥಾನದ ಮುಂದಕ್ಕೆ ತೆಗೆದುಕೊಂಡು ಹೋಗಿ ಕರಿಯ ಕಂಬಳಿಯನ್ನು ಹಾಸಿ ಮುದ್ದೆ ಇಟ್ಟು ಅದಕ್ಕೆ ಪೂಜೆ

ಮಾಡುತ್ತಾರೆ. ಇದನ್ನು ಸಮರ್ಥರಾದವರು ಊಟ ಮಾಡುತ್ತಾರೆ. ಈ ಶಾಸ್ತ್ರ ಮುಗಿದ ಮೇಲೆ ಧಾರೆ ಊಟ ಮಾಡುತ್ತಾರೆ. ಅವರ ಶಕ್ತಿಯನುಸಾರ ಮಾಂಸದ ಅಡಿಗೆಯನ್ನು ಮಾಡಿಸಿರುತ್ತಾರೆ. ಇದು ಕಾಡುಗೊಲ್ಲರಲ್ಲಿ ಒಂದು ವಿಶಿಷ್ಠವಾದ ಶಾಸ್ತ್ರ.

ಇದಾದ ನಂತರ ಜಾಡಿ ತೀರಿಸುವ ಶಾಸ್ತ್ರವನ್ನು ಮಾಡುತ್ತಾರೆ. ಜಾಡಿ ಎಂದರೆ ಕರಿಯ ಕಂಬಳಿ ಇದನ್ನು ಹಾಸಿ ಅದರ ಮೇಲೆ ಗದ್ದುಗೆಯನ್ನು ಮಾಡಿ ಗಡಿಗೆಯನ್ನು ಇಟ್ಟು ಅದಕ್ಕೆ ಅಡಿಗೆ ತುಂಬಿ ಬಾಳೆ ಎಲೆ ಹಾಕಿ ಸೆಗಣಿಯನ್ನು ಇಟ್ಟು ಅದಕ್ಕೆ ದೇವರ ಮುದ್ರೆಯನ್ನು ಹೊತ್ತಿಶಾಸ್ತ್ರ ಮಾಡುತ್ತಾ, ಇನ್ನೂ ಮುಂತಾದ ಶಾಸ್ತ್ರಗಳನ್ನು ಮಾಡಿ ಮದುವೆ ಮುಗಿಸುತ್ತಾರೆ. "ಕಾಡುಗೊಲ್ಲರ ಮದುವೆಯ ವಿಧಾನವನ್ನು ಅಭ್ಯಾಸ ಮಾಡಿದಾಗ ಇದರಲ್ಲಿ ಬೇರೆ ಜಾತಿಗಳಲ್ಲಿ ನಡೆಯುವ ಮದುವೆಯ ಪದ್ಧತಿಯ ಪ್ರಭಾವವಿರುವುದು ಕಂಡು ಬರುತ್ತದೆ. ಕುರುಬರು, ಒಕ್ಕಲಿಗೂ ಮೊದಲಾದ ಜಾತಿಗಳ ಮದುವೆ ವಿಧಾನಕ್ಕೂ ಕಾಡುಗೊಲ್ಲರು ಮದುವೆಯ ವಿಧಾನಕ್ಕೂ ಅನೇಕ ವಿಷಯಗಳಲ್ಲಿ ಸಾಮ್ಯತೆಯಿದೆ. ಆದರೆ ಕಾಡುಗೊಲ್ಲರು ಬ್ರಾಹ್ಮಣ ಪೂಜಾರಿ ಅಥವಾ ವೀರಶೈವ ಆರಾಧ್ಯ – ಇವರಿಗೆ ವಿವಾಹ ಮಾಡಿಸಲು ಅವಕಾಶವಿಲ್ಲ. ಇವರ ಕಾರ್ಯವನ್ನು ಕಾಡುಗೊಲ್ಲರಲ್ಲಿರುವ ಪೂಜಾರಿಯೇ ಮಾಡುತ್ತಾರೆ. ಆದರೆ ಈಚೀಚೆಗೆ ಕಾಡುಗೊಲ್ಲರಲ್ಲಿ ಮುಂದುವರೆದವರು ಬ್ರಾಹ್ಮಣ ಪುರೋಹಿತರನ್ನಾಗಲಿ. ವೀರಶೈವ ಆರಾಧ್ಯರನ್ನಾಗಲಿ ಕರೆಯುವ ಅಭ್ಯಾಸ ಬಳಕೆಗೆ ಬರುತ್ತಿದೆ."[32]

ಕಾಡುಗೊಲ್ಲರಲ್ಲಿ ಸಾವಿನ ಆಚರಣೆಯನ್ನು ನೋಡಿದಾಗ ಅದು ಸಹ ಒಕ್ಕಲಿಗರಲ್ಲಿ, ಕುರುಬರಲ್ಲಿನ ರೀತಿ ಸಂಪ್ರದಾಯ ಕಂಡು ಬರುತ್ತದೆ. ಒಕ್ಕಲಿಗರಲ್ಲಿ ಊರಿಂದ ಹೊರಗೆ ಇಟ್ಟು ಸ್ನಾನ ಮಾಡಿಸುವುದಿಲ್ಲ. ಇವರಲ್ಲಿ ಊರಿಂದ ಹೊರಗೆ ಇಟ್ಟು ಸ್ನಾನ ಮಾಡಿಸುತ್ತಾರೆ. ಸತ್ತ ವ್ಯಕ್ತಿಯನ್ನು ಮನೆಯಿಂದ ಹೊರಗಡೆ ಇಟ್ಟು, ಸತ್ತ ವ್ಯಕ್ತಿಯ ಮಕ್ಕಳು ಅಗಸರ ಮನೆಯಿಂದ ಒಂದು ಹೊಸ ಮಡಿಕೆಯನ್ನು ತರಿಸಿ ಒಬ್ಬ ವಿಧುವೆಯನ್ನು ಕರೆದು ಆರು ಇಡಿ ಅಕ್ಕಿಯನ್ನು ಕೊಟ್ಟು ಅವಳನ್ನು ಬೇಯಿಸಲು ಹೇಳುತ್ತಾರೆ. ಶವವನ್ನು ಊರಿಂದ ಹೊರಗೆ ತಂದು ಸ್ನಾನ ಮಾಡಿಸಿ ಇಬ್ಬರು ಹೊರುವ ಚಟ್ಟವನ್ನು ಸಿದ್ಧಪಡಿಸಿ ಅದಕ್ಕೆ ಕರಿಯ ಕಂಬಳಿ ತುಂಡನ್ನು ಹಾಸಿ ಹೆಣ ಮಲಗಿಸಿ ಅದಕ್ಕೆ ಹೊಸ ಬಟ್ಟೆಯನ್ನು ಹಾಕುತ್ತಾರೆ. ಹೆಣದ ಎದೆಯ ಮೇಲೆ ವಿಧುವೆ ಬೇಯಿಸಿದ ಅನ್ನವನ್ನು ಒಂದು ಬಟ್ಟಲಿಗೆ ಹಾಕಿ ಹೆಣದ ಎದೆಯ ಮೇಲೆ ಕಟ್ಟುತ್ತಾರೆ. ಮೃತ ವ್ಯಕ್ತಿಯ ಮಕ್ಕಳು ಇಬ್ಬರು ಇಲ್ಲದಿದ್ದರೆ ಅವರ ಸಂಬಂಧಿಕರು ಹೆಣ ಎತ್ತುಕೊಂಡು ಹೋಗಿ

---

32 ತೀನಂ. ಶಂಕರ ನಾರಾಯಣ, ಕಾಡುಗೊಲ್ಲರ ಸಂಪ್ರದಾಯ, ಪುಟ ಸಂಖ್ಯೆ 159.

ಮೊದಲೇ ಗುಂಡಿಯನ್ನು ತೊಡಿದ ಜಾಗದಲ್ಲಿ ಇಟ್ಟು ಮಡಿಕೆ ಹೊಡೆಯುವ ಶಾಸ್ತ್ರ ಮುಗಿಸಿ ಹೆಣ ಉಳುತ್ತಿದ್ದರೆ ಇವರು ಪೂರ್ವಕ್ಕೆ ತಲೆಯನ್ನು ಹಾಕಿ ಪಶ್ಚಿಮಕ್ಕೆ ಕಾಲುಗಳನ್ನು ನೀಡುವ ಸಂಪ್ರದಾಯ ಬೇರೆಯಾಗಿದೆ. ಬಂದವರೆಲ್ಲಾ ಒಂದೊಂದು ಇಡಿ ಮಣ್ಣನ್ನು ಹಾಕಿ ಗುಂಡಿ ಮುಚ್ಚುತ್ತಾರೆ. ಎಲ್ಲ ಜನಕ್ಕೆ ವೀಳ್ಯೆದಲೆಯನ್ನು ಸತ್ತ ಮನೆಯವರು ಕೊಡುತ್ತಾರೆ. ಮನೆಗೆ ಹೋದ ಜನ ಹಟ್ಟಿಯಿಂದ ಹೊರಗೆ ಸಗಣಿಯಾಕಿ ಅದಕ್ಕೆ ಕಳ್ಳಿಯ ಒಂದೊಂದು ಎಸರಳನ್ನು ಕಿತ್ತು ನೆಡುತ್ತಾರೆ. ಸತ್ತವರ ಮನೆಯ ಹತ್ತಿರ ಸ್ವಲ್ಪ ಜಾಗವನ್ನು ಸೆಗಣಿಯಿಂದ ಸಾರಿಸಿ ಸೆಗಣಿ ಇಟ್ಟು ದೀಪ ಹಚ್ಚಿರುತ್ತಾರೆ. ಆ ದೀಪಕ್ಕೆ ಎಲ್ಲರು ಪೂಜೆ ಮಾಡುತ್ತಾರೆ. ಶವವನ್ನು ಹೊತ್ತವರನ್ನು ಹಟ್ಟಿಯಿಂದ ಹೊರಗೆ ನಿಲ್ಲಿಸಿ ನೀರು ಹಾಕಿ ಅಗಸರು ಅವರಿಗೆ ಗೋವಿನ ಗಂಜಲ ಕುಡಿಸುತ್ತಾರೆ. ಅವರು ಸಹ ಕಳ್ಳಿಯ ಎಸಳನ್ನು ಸೆಗಣಿಗೆ ಸಿಕ್ಕಿಸಿ ಊರ ಒಳಗೆ ಬಂದು ದೀಪಕ್ಕೆ ಪೂಜೆ ಮಾಡುತ್ತಾರೆ.

ಮೂರನೇಯ ದಿನ ಅನ್ನ ಬೇಯಿಸಿದ ವಿಧುವೆಯನ್ನು ಕರೆಸಿ ಕುಂಬಾರರ ಮನೆಯಿಂದ ಮಡಿಕೆ, ಮುಚ್ಚಳ ತರಿಸಿ ಅವಳ ಅಂಗೈಯಿಂದ ಮೂರು ಸಾರಿ, ಮುಂಗೈಯಿಂದ ಮೂರು ಸಾರಿ ಅಕ್ಕಿ ಹಾಕಿ ಅನ್ನ ಬೇಯಿಸಿ ಮೊಸರನ್ನು ಕಲೆಸಿ ಅಡಿಕೆ ಪಟ್ಟಿಗೆ ಹಾಕಿ ಸಮಾಧಿಯ ಹತ್ತಿರಕ್ಕೆ ಹಟ್ಟಿಯವರೆಲ್ಲರೂ ಹೋಗುತ್ತಾರೆ. ಅನ್ನವನ್ನು ತಂದ ಹೆಂಗಸು ಸಮಾಧಿಯಿಂದ ಸ್ವಲ್ಪ ದೂರದಲ್ಲಿ ಅನ್ನವನ್ನು ಇಡುತ್ತಾಳೆ. ಬಂದವರೆಲ್ಲ ಒಂದೊಂದು ಗೇಣು ಮುಂದೆ ಮುಂದೆ ಇಡುತ್ತಾರೆ. ಕೊನೆಗೆ ಶವ ಹೊತ್ತವರು ಅದನ್ನು ಇಡುತ್ತಾರೆ. ಆಗ ಕಾಗೆ ಬಂದು ಅನ್ನ ಮುಟ್ಟಿದರೆ ಸತ್ತ ವ್ಯಕ್ತಿಗೆ ಒಳ್ಳೆಯದು ಎಂದು ಸಂಪ್ರದಾಯ. ಕಾಗೆ ಮುಟ್ಟದಿದ್ದರೆ ಶವ ಹೊತ್ತ ವ್ಯಕ್ತಿಗಳನ್ನು ಅದನ್ನು ಹಳ್ಳಕ್ಕೂ ಕೆರೆಗೂ ಬಿಡುತ್ತಾರೆ. ಇದಾದ ಮೇಲೆ ಸತ್ತ ವ್ಯಕ್ತಿಯ ಹೊತ್ತವರನ್ನು ಕರೆಸಿ 'ಹೆಗಲು ತೊಡೆಯುವ ಶಾಸ್ತ್ರ' ಮಾಡುತ್ತಾರೆ.

ಒಂದು ತಿಂಗಳು ಕಳೆದ ಮೇಲೆ ಸತ್ತ ವ್ಯಕ್ತಿಯ ಮಕ್ಕಳು ಸಮಾಧಿಯ ಬಳಿಗೆ ಹಣ್ಣು ಹೂವು ಕಾಯಿಗಳನ್ನು ತೆಗೆದುಕೊಂಡು ಹೋಗುತ್ತಾರೆ. ಅವರ ಜೊತೆಗೆ ಹಟ್ಟಿಯ ಎಲ್ಲಾ ವ್ಯಕ್ತಿಗಳು ಹೋಗಿ ಸಮಾಧಿಗೆ ಒಂದು ಹೂವನ್ನು ಹಾಕಿ ಒಂದು ತೊಟ್ಟು ಹಾಲನ್ನು ಹಾಕುತ್ತಾರೆ. ಸತ್ತ ವ್ಯಕ್ತಿಯ ಮಕ್ಕಳು ಸಮಾಧಿಯಿಂದ ಎರಡು ಗಡಿಗೆ ಮಣ್ಣನ್ನು ತುಂಬಿಕೊಂಡು ಒಂದು ಗಡಿಗೆ ಮಣ್ಣನ್ನು ನೀರಿಗೆ ಬಿಡುತ್ತಾರೆ. ಇನ್ನೊಂದು ಗಡಿಗೆ ಮಣ್ಣನ್ನು ತಮ್ಮ ಜಮೀನಿನಲ್ಲಿ ಊತು ಸಮಾಧಿ ಮಾಡಿಕೊಳ್ಳುತ್ತಾರೆ.

"ಈಚೀಚೆಗೆ ಶವವನ್ನು ಚಟ್ಟದ ಮೇಲೆ ಹೊತ್ತು ತರುವಾಗ ಶವದ ಮೇಲೆ ಕಡಲೆಪುರಿಯನ್ನು ವೀಳ್ಯೆದೆಲೆಯನ್ನು ಎರಚುವ ಪದ್ಧತಿ ಬಳಕೆಗೆ ಬರುತ್ತಿದೆ."[33]

ಮಾಟ ಜಗತ್ತಿನಲ್ಲಿ ಹಿಂದಿನಿಂದಲೂ ಮನುಷ್ಯ ಪ್ರಕೃತಿಯ ವಿವಿಧ ಶಕ್ತಿ ತನ್ನ ಉಪಯೋಗಕ್ಕೆ ಬಳಸಿಕೊಳ್ಳುವುದನ್ನು ಕಾಣುತ್ತಿದ್ದೇವೆ. ಕಾಡುಗೊಲ್ಲರಲ್ಲಿ ಮಾಟಕ್ಕೆ ಹೆಚ್ಚಿನ ಮಹತ್ವವನ್ನು ಕೊಟ್ಟಿಲ್ಲ. ಆದರೂ ಅವರಿಗೆ ಮಾಟದ ಶಕ್ತಿಯಲ್ಲಿ ನಂಬಿಕೆಯುಂಟು ತಾವು ಸ್ವತಃ ಮಾಟ ಮಾಡದಿದ್ದರೂ ತಮಗೆ ಅಗತ್ಯವಾದಾಗ ಒಳ್ಳೆಯದಾಗಲಿ ಎಂದು, ಇನ್ನೊಬ್ಬರಿಗೆ ಕೆಟ್ಟದಾಗಲಿ ಎಂದೊ ಮಾಟ ಮಾಡಿಸುತ್ತಾರೆ. ಇಂದು ಸಹ ಪ್ರಚಲಿತವಾಗಿರುವುದಲ್ಲದೆ ಜುಂಜಪ್ಪನ ಕಾವ್ಯದಲ್ಲಿಯು ಇದಕ್ಕೆ ಉದಾಹರಣೆಗಳಿರುವುದನ್ನು ಕಾಣುತ್ತೇವೆ.

ಜುಂಜಪ್ಪನ ಏಳಿಗೆಯನ್ನು ಸಹಿಸದ ಅವನ ಸೋದರ ಮಾವಂದಿರು ದನಗಳು ಕಟ್ಟೆಯ ನೀರನ್ನು ಕುಡಿದು ರಕ್ತಕಾರಿ ಏಳ ಹೊಟ್ಟಿನ ದನಗಳು ಸಾಯಲಿ ಎಂದು ಮಾದಿಗರ ಪುಟ್ಟನಿಗೆ ಹಣವನ್ನು ಕೊಟ್ಟು ಮಾಡಿಸಿದ್ದುದನ್ನು ಕಾಣಬಹುದಾಗಿದೆ. ಅದುದರಿಂದ ಗೌರಸಂದ್ರದ ಮಾರಕ್ಕನ ನೆರವಿನಿಂದ ಜುಂಜಪ್ಪ ಅದರ ಶಕ್ತಿಯನ್ನು ಹೋಗಲಾಡಿಸಿದುದನ್ನು ನೋಡಬಹುದು. ಹಾಗೆಯೇ ಜುಂಜಪ್ಪನ ದನಗಳಿಗೆ ನೀರಿಲ್ಲದೆ ಸಾಯಲಿ ಎಂದು ಅವನ ಸೋದರಮಾವರು ಮಳೆಬೆಳೆ ಬರದ ರೀತಿಯಲ್ಲಿ ಮರಡಿ ರಂಗಣ್ಣನ ಕೈಯಲ್ಲಿ ಮಾಡಿಸಿರುತ್ತಾರೆ. ಏಳು ವರ್ಷ ಮಳೆ ಇಲ್ಲದೆ ದನಗಳಿಗೆ ತೊಂದರೆಯಾಗುತ್ತದೆ ಇದನ್ನು ತಿಳಿದ ಜುಂಜಪ್ಪ ಅದರ ಶಕ್ತಿ ಹೋಗಲಾಡಿಸಿ ಮರಡಿ ರಂಗಣ್ಣನಿಗೆ ಬುದ್ಧಿಯನ್ನು ಕಲಿಸಿದನು.

ಇದನ್ನು ನೋಡಿದಾಗ ಮಾಟ ಕಾಡುಗೊಲ್ಲರಲ್ಲಿ ಅದೊಂದು ಪ್ರಭಾವ ಬೀರಿಲ್ಲ ಎನಿಸುತ್ತದೆ. ಹಿಂದೆ ದನಗಳನ್ನು ಇಂದು ಕುರಿಗಳನ್ನು ಅವು ನಾಶವಾಗಲಿ ಎಂದು ಮಾಟ ಮಾಡಿಸುತ್ತಿದ್ದರೆ ವಿನಾಶಾತ್ಮಕ ಮಾಟ, ರಕ್ಷಣಾ ಮಾಟ, ಉತ್ಪಾದಕ ಮಾಟ ಎಂಬ ಬಗೆ ಬಗೆಯ ಮಾಟಗಳಿರುವುದನ್ನು ಕಾಣಬಹುದಾಗಿದೆ.

ಮಾಟಕ್ಕೆ ಮತ್ತು ವೈದ್ಯಕ್ಕೆ ಸಾಮಾನ್ಯವಾಗಿ ಆದಿವಾಸಿ ಸಮಾಜಗಳಲ್ಲಿ ಮತ್ತು ಅವಿದ್ಯಾವಂತ ಸಮಾಜಗಳಲ್ಲಿ ಸಂಬಂಧವಿರುತ್ತದೆ. ಕಾಯಿಲೆಗಳು ಬರಲು ಕೆಲವು ಅಲೌಖಿಕ ಶಕ್ತಿಗಳು ಕಾರಣ ಎಂಬ ನಂಬಿಕೆ ಬಲವಾಗಿ ಬೇರೂರಿರುವುದು ಇದಕ್ಕೆ ಮುಖ್ಯವಾದ ಕಾರಣ

---

[33] ತೀನಂ. ಶಂಕರ ನಾರಾಯಣ, ಕಾಡುಗೊಲ್ಲರ ಸಂಪ್ರದಾಯ, ಪುಟ ಸಂಖ್ಯೆ 160.

ಕೆಲವು ಸಲ ದೇಹದಲ್ಲಿ ಕಾರ್ಯವನ್ನು ಸರಿಯಾಗಿ ನಿರ್ವಹಿಸದೆ ಹೋದಾಗ ಅದಕ್ಕೆ ಔಷದವನ್ನು ಕೊಟ್ಟರು ಸಹ ಅದು ವಾಸಿಯಾಗದೆ ಹೋದಂತಹ ಸಂದರ್ಭದಲ್ಲಿ ಈ ಮಾಟದ ಮೊರೆ ಹೋಗುತ್ತಾರೆ. ಕಾಯಿಲೆ ವಾಸಿಯಾಗಲು ಮಾಟದ ಕ್ರಮ ಔಷಧಿಯ ಕ್ರಮ ಎರಡನ್ನು ಉಪಯೋಗಿಸುವ ಉದಾಹರಣೆಗಳನ್ನು ನೋಡಬಹುದು.

ಕುರಿಗಳಿಗೆ ಮತ್ತು ಮೇಕೆಗಳಿಗೆ ಗದ್ದ ಊದಿಕೊಂಡು ಮೂಗಿನ ಎರಡು ಹೊಳ್ಳೆಗಳಿಂದಲೂ ಹಸಿರು ಬಣ್ಣದ ಸಿಂಬಳ ಒಂದೇ ಸಮನೆ ಸುರಿಯುತ್ತಿದ್ದರೆ ಅದನ್ನು ಕರೇಗಾಲು ರೋಗ ಎನ್ನುತ್ತಾರೆ. ಇದನ್ನು ಹೋಗಲಾಡಿಸಲು ಔಷಧಿಯ ಕ್ರಮವನ್ನು ಬಳಸುವಂತೆಯೇ ಮಾಟದ ಕ್ರಮವನ್ನು ಕಾಡುಗೊಲ್ಲರು ಬಳಸುತ್ತಾರೆ. ಹಾಗೆಯೇ ಕುರಿಗಳಿಗೆ ಸಿಡುಬು ರೋಗ ಬಂದಾಗ ರೋಗ ಬಂದಿರುವ ಒಂದು ಕುರಿಯನ್ನು ಸಾಯಿಸಿ ಅದರ ಚರ್ಮವನ್ನು ಸುಲಿದು, ಚರ್ಮದಲ್ಲಿ ಸಿಡುಬು ರೋಗದ ಗಂಟು ಇರುವ ಭಾಗವನ್ನು ಕತ್ತರಿಸಿ ತೆಗೆದುಕೊಂಡು ಅದನ್ನು ಚೆನ್ನಾಗಿ ಅರೆದು ನೀರಿನ ರೂಪದಲ್ಲಿ ಸಂಗ್ರಹಿಸಿ, ಸಿಡುಬು ರೋಗ ಬಂದಿರುವ ಕುರಿಯ ಕಿವಿಯನ್ನು ತೂತು ಮಾಡಿ ಈ ನೀರನ್ನು ಅದರ ಕಿವಿಗೆ ಬಿಡುತ್ತಾರೆ. ಇದರಿಂದ ಸಿಡುಬಿನ ರೋಗದ ಸತ್ತ ವಿಷಕ್ರಿಮಿಗಳನ್ನು ಸಿಡುಬುರೋಗ ಬಂದಿರುವ ಕುರಿಗಳ ರಕ್ತಕ್ಕೆ ಸೇರಿಸಿದಂತಾಗುವುದರಿಂದ ಈ ರೋಗ ಬಂದಿರುವ ಕುರಿಗಳಲ್ಲಿ ರೋಗ ನಿರೋಧಕ ಶಕ್ತಿ ಹೆಚ್ಚಾಗಿ ರೋಗ ಬಂದಿರುವ ಕುರಿ ವಾಸಿಯಾಗುತ್ತವೆ ಎಂಬ ನಂಬಿಕೆ ಇದೆ.

ಹಾಗೆಯೇ ಕೆಟ್ಟ ಕಣ್ಣಿಗೆ ಸಂಬಂಧಿಸಿದ ನಂಬಿಕೆಗಳು ಕರ್ನಾಟಕದಲ್ಲಿ ಮಾತ್ರವಲ್ಲ ಇಡೀ ಭಾರತದಲ್ಲಿ ಅಲ್ಲ ಇಡೀ ಪ್ರಪಂಚದಲ್ಲಿ ಕೆಲವು ಕಡೆ ಪ್ರಚಲಿತವಾಗಿರುವುದನ್ನು ಕಾಣುತ್ತೇವೆ. ಹುಟ್ಟಿದ ತಕ್ಷಣ ಕಣ್ಣು ಬಿಟ್ಟವರ ಕಣ್ಣು ತುಂಬಾ ಕೆಟ್ಟದು ಅವರು ಯಾರಾದರೂ ಊಟ ಮಾಡುವಾಗ, ಮಕ್ಕಳು ಹಾಲು ಕುಡಿಯುವಾಗ, ಬಾಣಂತಿಯ, ಬಸುರಿಯರು, ಮಕ್ಕಳಿಗೆ ಹೊಟ್ಟೆ ನೋವು ಬಂದಿ ವಾಂತಿಯಾಗುತ್ತದೆ ಎಂದು ದೃಷ್ಟಿ ತೆಗೆಯುವ ಸಂಪ್ರದಾಯವಿದೆ. ಇದನ್ನು ತೆಗೆಯಲು ಮೂರು ಸಾರಿ ಉಗುಳುವುದು, ನೆಟ್ಟಿಗೆ ತೆಗೆಯುವುದು. ಇಳಿ ತೆಗೆಯುವುದು ಪ್ರಚಲಿತದಲ್ಲಿದೆ. ಕಾಡುಗೊಲ್ಲರಲ್ಲಿಯು ಇದಕ್ಕೆ ಹೆಚ್ಚಿನ ಮಹತ್ವವಿಲ್ಲದಿದ್ದರು ಹೀಗೆ ಆದಾಗ ಅವರು ಕಂಚಿನ ತಟ್ಟೆಗೆ ನೀರು ತುಂಬಿ ಮೂರು ಗುಡಿಸಲಿಂದ ಸೋಗೆ ತಂದು ಅದನ್ನು ಒಂದು ಮಡಿಕೆಗೆ ಹಾಕಿ ವಿಳ್ಳಾರತಿಯನ್ನು ಮಾಡಿ ಮಡಿಕೆಗೆ ಸೊಗೆಯನ್ನು ಹಚ್ಚಿ ಅದರೊಳಗೆ ಹಾಕಿ ದೃಷ್ಟಿ ತೆಗೆಯುತ್ತಾರೆ. ಹಾಗೆಯೇ ಮಂಗಾರೆ ಕಳ್ಳಿ ಮೂರು ಕಣ್ಣಿನ ಚಿಪ್ಪು ಇವುಗಳಿಂದಲೂ ದೃಷ್ಟಿ ತೆಗೆಯುತ್ತಾರೆ.

ಕಾಡುಗೊಲ್ಲರಲ್ಲಿ ಕಣಿ ಮತ್ತು ಭವಿಷ್ಯವನ್ನು ನುಡಿಯುವುದನ್ನು ಕಾಣಬಹುದು. ಕಾಡುಗೊಲ್ಲರಲ್ಲಿ ಈ ಕಣಿ ಹೇಳುವುದನ್ನು ಗೌರಸಂದ್ರದ ಮಾರಕ್ಕೆ ಬೇವಿನ ಹಟ್ಟಿ ಕರಿಯಮ್ಮ ಕಾಡುಗೊಲ್ಲರ ಪ್ರಕಾರ ಕೊರೆವಂಜಿಯ ಕೆಲಸವನ್ನು ಕಾಡುವವರು ಜುಂಜಪ್ಪನ ಕಾವ್ಯದಲ್ಲಿ ಜುಂಜಪ್ಪನ ತಾಯಿ ಚಿನ್ನಮ್ಮ ಮಕ್ಕಳಿಲ್ಲದೆ ಕೊರಗುವಾಗ ಜುಂಜಪ್ಪ ಕಷ್ಟ ಪಡುವಾಗ ಬಂದು ನಡೆದಿರುವ ಮಾಟ ಮಂತ್ರ ಪ್ರಭಾವವನ್ನು ಅವರಿಗೆ ತಿಳಿಸಿ, ಅವರಿಗೆ ಒಳ್ಳೆಯದನ್ನು ಮಾಡಿರುವುದನ್ನು ಕಾಣಬಹುದು. ನೆನೆದಾಗ ಬಂದು ಅವರ ಒಳ್ಳೆಯದನ್ನು ಮಾಡಿರುವುದನ್ನು ಕಾಣಬಹುದು. ನೆನೆದಾಗ ಬಂದು ಅವರ ಕಷ್ಟಕ್ಕೆ ಪರಿಹಾರವನ್ನು ಸೂಚಿಸಿರುವುದನ್ನು ಕಾಣಬಹುದು. ಈಗಲು ಈ ದೇವರ ಜಾತ್ರೆಗಳ್ಳಿ ಕಣಿ ಹೇಳುವುದೆ ವಿಶೇಷವಾಗಿದೆಯಂತೆ.

'ಮುಂಗನಸು' ಬೀಳುವ ನಂಬಿಕೆಯು ಕಾಡುಗೊಲ್ಲರಲ್ಲಿ ಇರುವುದನ್ನು ಕಾಣತ್ತೇವೆ. ಜುಂಜಪ್ಪನ ಕಾವ್ಯದಲ್ಲಿ ಜುಂಜಪ್ಪನಿಗೆ ಬೇರೊಬ್ಬ ವ್ಯಕ್ತಿಯ ಮನಸ್ಸಿನಲ್ಲಿದ್ದ ಆಲೋಚನೆಗಳನ್ನು ತಿಳಿಯುವ, ಬಹುದೂರದಲ್ಲಿ ನಡೆದ ಘಟನೆಯನ್ನು ಕಾಣುವ, ಭವಿಷ್ಯವನ್ನು ತಿಳಿಯುವ ಶಕ್ತಿಯನ್ನು ಹೊಂದಿದ್ದೆನೆಂಬುದನ್ನಾ ತಿಳಿಯಬಹುದು. ಈಗಲು ಕಾಡುಗೊಲ್ಲರು ಮುಂಗನಸಿಗೆ ಬೆಲೆಯನ್ನು ಕೊಡುವುದನ್ನು ಕಾಣಬಹುದು.

ಗಣೆ ಊದಿ ಶಾಸ್ತ್ರ ಹೇಳುವ ಸಂಪ್ರದಾಯ ಕಾಡುಗೊಲ್ಲರಲ್ಲಿ ಮಾತ್ರ ಪ್ರಚಲಿತವಾಗಿದೆ. ಕಾಡುಗೊಲ್ಲರು ಗಣೆ ಊದಿ ಶಾಸ್ತ್ರ ಹೇಳುವ ಸ್ಥಳಗಳು ಇರುವುದನ್ನು ಕಾಣಬಹುದು. ಪೂಜಾರಿಯ ಹತ್ತಿರ ಶಾಸ್ತ್ರ ಕೇಳುತ್ತಾರೆ ಶಾಸ್ತ್ರ ಹೇಳಿದ್ದು ನಿಜ ಎಂದು ಸಹ ನಂಬುತ್ತಾರೆ.

ಹೀಗೆ ಕಾಡುಗೊಲ್ಲರು ಬದುಕು ಮತ್ತು ಸಂಪ್ರದಾಯ ಆಚರಣೆಗಳಿಂದ ಬೇರೆಯಾಗಿ ನಿಂತಿರುವುದನ್ನು ಕಾಣಬಹುದಾಗಿದೆ.

# ಅಧ್ಯಾಯ – 5

## ಜುಂಜಪ್ಪನ ಕಾವ್ಯ

ಕಾಡುಗೊಲ್ಲರ ಅಧಿವೇವತೆ ಜುಂಜಪ್ಪ ಒಬ್ಬ ಸಾಂಸ್ಕೃತಿಕ ವೀರ. ದನಗಳನ್ನೆ ತಮ್ಮ ಸಂಪತ್ತಾಗಿ ನಂಬಿಕೊಂಡು, ಅವುಗಳನ್ನು ಮೇಯಿಸುವ ಕೆಲಸಕ್ಕಾಗಿ, ಕಾಡು–ಮೇಡು ಅಲೆಯುವ ಅಲೆ ಮಾರಿ ಜನಾಂಗವೊಂದರ ಅತಂತ್ರ ಸ್ಥಿತಿಯ ಪ್ರತೀಕವಾಗಿ ಜುಂಜಪ್ಪ ಕಾಣಿಸಿಕೊಳ್ಳುತ್ತಾನೆ. ಜುಂಜಪ್ಪ ಕಾಡು ಗೊಲ್ಲರನ್ನು ಉದ್ಧಾರ ಮಾಡುವುದಕ್ಕಾಗಿ ಹುಟ್ಟಿ ಬಂದ ದೇವರಾಗಿದ್ದಾನೆ. ಈತನ ಜೀವನದಲ್ಲಿ ನಡೆದ ಘಟನೆಗಳ ಕಾಡು ಗೊಲ್ಲರ ಸಂಪ್ರದಾಯವಾಗಿ ಬಂದಿರುವುದನ್ನು ಕಾಣುತ್ತವೆ. ಸಿನ್ನಮ್ಮನ ಹೊಟ್ಟೆಯಲ್ಲಿ ಅವತರಿಸಿದ ಸಂದರ್ಭದಲ್ಲಿ ತಾನು ಕಾಡಿನಲ್ಲಿ ಹುಟ್ಟಬೇಕು ಎಂದು ಗುಡಿಸಿಲನ್ನು ಹಾಕಿಸುವುದು ಮೂರು ತಿಂಗಳು ಕಾಡಿನಲ್ಲಿಯೇ ಇರಬೇಕು. ಎಂಬುದುವು ಸೂತಕವನ್ನು ಕಳೆಯುವ ಪರಿ ಇವುಗಳನ್ನು ನೋಡಿದಾಗ ಕಾಡುಗೊಲ್ಲರ ಅವಿಭಾಜ್ಯ ಅಂಗ ಜುಂಜಪ್ಪನ ನಿಯಮಗಳು ಎನಿಸುತ್ತದೆ. ಜುಂಜಪ್ಪ ಶಿವನ ವರದಿಂದ ವೀರಭದ್ರ ಸಿನ್ನಮ್ಮನ ಹೊಟ್ಟೆಯಲ್ಲಿ ಮಗನಾಗಿ ನನಗೆ ಸೂತಕವಾಗುತ್ತದೆ ಎಂದು ಸಿನ್ನಮ್ಮನ ಬುಜದಿಂದ ಹೊರಗೆ ಬಂದದ್ದು ಕಾಡುಗೊಲ್ಲರಲ್ಲಿ ಕಾಡು ಮತ್ತು ನಾಡಿನ ಅನೇಕಾರು ಜನ ವರ್ಗಗಳು ಪೂಜಿಸುವ ದೈವಗಳು ಮತ್ತು ದೈವಗಳ ಬಗ್ಗೆ ಕಟ್ಟಿಕೊಂಡಿರುವ ನೂರಾರು ಕಥೆಗಳಲ್ಲಿ ಜುಂಜಪ್ಪನು ಒಬ್ಬ. ಇದು ಕಾಡುಗೊಲ್ಲರಲ್ಲಿ ಪರಂಪರಾಗತವಾಗಿ ಬಂದು ಜನರಲ್ಲಿ ಮೌಖಿಕವಾಗಿ ಉಳಿದು ಬಂದಿದ್ದ ಈ ಕಾವ್ಯವನ್ನು ಚಲುವರಾಜುರವರು ಸಂಪಾಸಿದಿ ಅದಕ್ಕೆ ಒಂದು ಮನ್ನಣೆಯನ್ನು ತಂದುಕೊಟ್ಟಿರುವುದನ್ನು ನೋಡುತ್ತೇವೆ. ಕಾಡು ಗೊಲ್ಲರ ಸಂಸ್ಕೃತಿಯ ಮೇರು ಕೃತಿ ಜುಂಜಪ್ಪನ ಕಾವ್ಯ.

ಜನಪದ ಮಹಾಕಾವ್ಯಗಳಲ್ಲಿ ಮಾದೇಶ್ವರ, ಮಂಟೇಸ್ವಾಮಿ ಕಾವ್ಯಗಳಂತೆ ಜುಂಜಪ್ಪನ ಕಾವ್ಯವೊಂದು ಒಂದು. ಮಾಹದೇಶ್ವರ, ಮಂಟೇಸ್ವಾಮಿಯರಂತೆ ಜುಂಜಪ್ಪನು ಸಹ ಒಬ್ಬ ಪವಾಡಪುರಷನಾಗಿರುವುದನ್ನು ಕಾಣುತ್ತೇನೆ. ಈ ಕಾವ್ಯ ಸಮಗ್ರವಾಗಿ ಒಂದು ಜನಾಂಗದವರ ವಿವರವನ್ನು ಕಟ್ಟಿಕೊಡುತ್ತದೆ. ಇದನ್ನು ಓದುವುದರೊಳಗೆ ಕಾಡುಗೊಲ್ಲರ ಜೀವನ ವಿಧಾನ, ನೀತಿ – ನಿಯಮ ಒಟ್ಟಾರೆಯಾಗಿ ಅವರ ಜೀವನದ ಪೂರ್ಣ ಪರಿಚಯವಾಗುತ್ತದೆ. ಈ ಕಾವ್ಯ ಹದಿಮೂರು ಸಂದುಗಳನ್ನು ಹೊಂದಿದೆ.

"ಶರಣಮ್ಮ ಶಿವನೀಗೆ

ಶರಣಮ್ಮ ಗುರುವೀಗೆ

ಕರಣೇ ಬಂದಾವು

ವಿಷ್ಣು ಈಶ್ವರ ಬ್ರಹ್ಮಾದೇವಾತಿ ನಿಮ್ಮ

ಸಿರಿ, ಪಾದಕೆ, ಶರಣ ಬಂದೇವು"[34]

ಹೀಗೆ ಶಿವನ ನಾಮಸ್ಮರಣೆಯಿಂದ ಮೊದಲಾಗಿ ವಿಷ್ಣು, ಬ್ರಹ್ಮದೇವರು, ಪಾರ್ವತಿ ಶ್ರೀರಾಮ, ಶನಿದೇವ, ವಡಿಗೇರಿಯ ವೀರನಾಗಮ್ಮ, ತಾಡೀ ನಾಗಮ್ಮ, ಜಂಗಾಳಸ್ವಾಮಿವರು ಕಾಟುಮದೇವರು, ಸಿತ್ತೂರುಲಿಂಗ, ಕಲ್ಲೆಲಿಂಗ, ಮಲ್ಲೆಲಿಂಗ, ಮೈಲಾರಲಿಂಗ, ಚನ್ನಬಸವ, ವಿಘ್ನೇಶ್ವರ, ಪಾರ್ವತಿ, ಸರಸ್ವತಿ, ನರಸಿಂಹಸ್ವಾಮಿ, ಪುರಲಳ್ಳಿ ಭೂತ ಮತ್ತು ಇನ್ನಿತರ ಭೂತಗಳೂ, ಗಂಗಮ್ಮ ತಿಮ್ಮಪ್ಪ, ರಂಗಪ್ಪ, ಈರಣ್ಣ, ಕಾರೇಹಳ್ಳಿ, ಹನುಮಪ್ಪ ಹೀಗೆ ಎಲ್ಲಾ ದೇವರುಗಳನ್ನ ನೆನೆದು ತಮ್ಮ ಪಾಪಗಳನ್ನು ಕಳೆ ಎಂದು ಬೇಡಿಕೊಳ್ಳುತ್ತಾರೆ. ಜುಂಜಪ್ಪನಿಗೆ ಸಹಾಯ ಮಾಡಿದ ಭೂತಪ್ಪ, ಮಾರಿಯರನ್ನು ನೆನೆಯುತ್ತಾರೆ. ಹಾಗೆಯೇ ತಮ್ಮ ಕುಲದೇವರಾದ ಜುಂಜಪ್ಪನನ್ನು ವೀರನಾಗಿ ಚಿತ್ರಿಸುವುದರ ಮೂಲಕ ಈ ರೀತಿ ನೆನೆಯುತ್ತಾರೆ.

"ಮೊದಲೆ ನೆನುದೆವೋ

ಮದುನಾರಿ ವೀರಾನ

ಮದುಗುದು ಗುಡ್ಡದ ಕಲಿಬೀರೊ

ಮದುಗುದು ಗುಡ್ಡದ

ಕಲಿಬೀರೋ ಜುಂಜಪ್ಪನೇ

ಮೊದಲೇ ಸೂಲ್ಲಾಗಿ ನೆನುದೇವೋ"[35]

ಇಲ್ಲಿ ಮೊದಲೇ ಸೊಲ್ಲಾಗಿ ಎಂಬುದು ಕಾಡುಗೊಲ್ಲರಲ್ಲಿ ಜುಂಜಪ್ಪ ಉಸಿರಿನಲ್ಲಿ ಉಸಿರಾಗಿ ಬೆರೆತು ಹೋಗಿರುವುದನ್ನು ಕಾಣುತ್ತೇವೆ.

[34] ಚಲುವರಾಜು, ಬುಡಕುಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 1.

[35] ಚಲುವರಾಜು, ಬುಡಕುಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 5.

ಶಿವ ಸ್ತುತಿಯಿಂದ ಸುರುವಾಗಿ ಗೋವಿಂದಾನ ನಾಮಸ್ಮರಣೆಯಿಂದ ಮುಕ್ತಾಯವಾಗುವ ಈ ಸಂದು ಎಲ್ಲಾ ದೇವರ ಸಮನ್ವಯದ ಪ್ರತೀಕವಾಗಿ ಇತರೆ ಕೆಲವು ಜನಾಂಗದವರ ರೀತಿಯಲ್ಲಿ ಕಾಡುಗೊಲ್ಲರು ಸಹ ಎಲ್ಲಾ ದೇವರುಗಳನ್ನು ನೆನೆಯುತ್ತಾರೆ.

## ಸಿತ್ತಯ್ಯ ಕಾಟುಮುಲಿಂಗರ ಹುಟ್ಟಿನ ಸಂದು

ಈ ಸಂದಿನಲ್ಲಿ ಈ ಕಾಲದಲ್ಲಿ ಜನರು ಹೇಗೆ ದೇವರನ್ನು ಪೂಜಿಸುತ್ತಿದ್ದರು ಎನ್ನುವುದಕ್ಕೆ ಶಿವ ಪಾರ್ವತಿ, ಲಿಂಗಗಳಿಗೆ ಪೂಜೆ ಮಾಡಿ ಮನುಷ್ಯರ ರೀತಿಯಲ್ಲಿ ಬಾಳೆಯವನದಲ್ಲಿ ತಾಂಬೂಲ ಹಾಕಿಕೊಳ್ಳುವಾಗ ಭೂಲೋಕದಲ್ಲಿ ಜನ ಪೂಜೆ ಮಾಡಿದ ದೂಪದ ಹೋಗೆ ಶಿವನ ಹತ್ತಿರಕ್ಕೆ ಹೋದಾಗ ಅವನಿಗೆ ತೃಪ್ತಿಯಾಗಿ ನಾಟ್ಯವಾಡುವಾಗ.

"ಶಿವನ ಬೆವರಿನೊಳಗೇ

ಬಲಗಡೆ ಭುಜುದೊಳಗೆ

ಸಿತ್ತೂರು ಲಿಂಗ ಅಂಬ

ದೇವರೊಡೆದಾನೋ

ಪರಮೇಶ್ವರನೆಡಗಡೆ ಭುಜದೊಳಗೆ

ಕಾಟುಮುಲಿಂಗ ಅಂಬೊಲಿಂಗ

ಬಡುದೀತಯೋ ಶಿವನೀಗೋ"[36]

ಭಕ್ತಿಯ ಮಹತ್ವವನ್ನು ಹೆಚ್ಚಿಸುವುದಕೊಸ್ಕರ ಈ ರೀತಿಯಲ್ಲಿ ಹೇಳಿರಬಹುದು.

ಹೀಗೆ ಶಿವನ ಬೆವರಿನಿಂದ ಹುಟ್ಟಿದ ಪರಿಯನ್ನು ಹೇಳುತ್ತಾರೆ. ಮಧ್ಯ ಪಾರ್ವತಿ ಪರಮೇಶ್ವರ ಆಕಡೆ ಈಕಡೆ ಸಿತ್ತೂರು ಲಿಂಗ, ಕಾಟುಮುಲಿಂಗ ಇವರನ್ನು ನೋಡಿ, ಶಿವ ಭಕ್ತರ ಮಹಿಮೆಯನ್ನ ಕಂಡು ಸಂತೋಷದಿಂದ ಪಾರ್ವತಿ ಶಿವ ಇವರಿಗೆ ಹೆಸರು ಇಡು ಈ ಹೆಸರುಗಳನ್ನ ಪಾರ್ವತಿ ಇಡುತ್ತಾಳೆ. ಮೂರು ದಿನ ಕೈಲಾಸದಲ್ಲಿದ್ದ ಅವರು ಭೂಲೋಕಕ್ಕೆ ಬರಲು ಅಪ್ಪಣೆಯನ್ನು ಕೇಳಿದಾಗ. ಸೋಮವಾರ ಮುಂಗೋಳಿ ಕೂಗುವಾಗ ನೀವು ನರಲೋಕಕ್ಕೆ ಇಳಿಯಿರಿ ಎಂದು ಹೇಳಿ ಅವರಿಗೆ ಬಂಗಾರದ ರಥವನ್ನು ತಯಾರಿಸಿ ಪಂಚೈದು ಕಳಸಗಳನ್ನು

[36] ಚಲುವರಾಜು, ಬುಡಕುಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 10.

ಇಟ್ಟು ಓಬಳುಪತಿಯನ್ನು ತಯಾರು ಮಾಡಿ ಕಳುಹಿಸಿದರು. 'ರೆಡಿ' ಎಂಬ ಪದ ನೋಡಿದರೆ ಹಾಡುಗಾರನ ಮೇಲೆ ಇಂಗ್ಲೀಷಿನ ಪ್ರಭಾವವಿತ್ತು ಎನಿಸುತ್ತದೆ.

ಭೂಲೋಕಕ್ಕೆಬಂದ ಸಿತ್ತರು ಲಿಂಗ ಕಾಟುಮದೇವರು ಸಿಕ್ತಿಗಿರಿ ಕಾಡೊಳಗೆ ಇಳಿಯುತ್ತಾರೆ. ಅಲ್ಲಿ ಬ್ರಾಹ್ಮಣರ ಬೊಮ್ಮಯ್ಯಲಿಂಗ ಎಂಬುವರ ಹೋಲದ ಪಕ್ಕ ಕಲ್ಯಾಣಿ ಇರುತ್ತೆ. ಅಲ್ಲಿ ಇವರು ಜಪತಪ ಮಾಡಿಕೊಂಡು ಇರುವಾಗ ಬ್ರಾಹ್ಮಣನ ಕಣ್ಣು ಅವರ ರಥಧ ಮೇಲೆ ಬಿದ್ದು ಇವರು ಕಾಡುಗೊಲ್ಲರು ಎನಿಸುತ್ತದೆ, ಇವರಿಗೇಕೆ ಈ ರಥ ಎಂದು ಕೊಂಡ ಅದನ್ನ ಏನಾದರೂ ಮಾಡಿ ನನ್ನದಾಗಿಸಿಕೊಳ್ಳಬೇಕೆಂದು ಅವರ ಹತ್ತಿರ ಸ್ನೇಹ ಬೆಳೆಸುವುದಕ್ಕೆ ನೋಡುತ್ತಾನೆ. ಪಗಡೆಯಾಟಕ್ಕೆ ಆಹ್ವಾನಿಸುತ್ತಾನೆ. ಇಲ್ಲಿಯ ಬ್ರಾಹ್ಮಣನ ಅನಿಸಿಕೆ ನೋಡಿದರೆ, ಇದೆಲ್ಲಾ ಮೇಲು ವರ್ಗದವರಲ್ಲಿ ಮಾತ್ರ ಇರಬೇಕು. ಕೆಳ ವರ್ಗದವರು ಈ ರೀತಿ ಇರಬಾರದು ಎಂಬ ಧೋರಣೆಯನ್ನು ಕಾಣಬಹುದು.

ಪಗಡೆಯಲ್ಲಿ ಬ್ರಾಹ್ಮಣ ಸೋತರೆ ನನ್ನ ತಂಗಿ ಮದುವೆ ಮಾಡಿಕೊಡುತ್ತೇನೆ ಎಂದು ಹೇಳಿ ನೀವು ಸೋತರೆ ಚಿನ್ನದ ರಥವನ್ನು ಕೊಡಬೇಕು ಎಂದು ಹೇಳಿ ಆಟ ಆಡುವಾಗ ಬ್ರಾಹ್ಮಣ ಸೋಲುತ್ತಾನೆ. ತಂಗಿಯನ್ನ ಕರೆತರುತ್ತೇನೆ, ಎಂದು ಹೋಗಿ, ಇವರು ಊರ ಒಳಗೆ ಬರುವುದಿಲ್ಲ ಎಂದು ಅಲ್ಲೆ ಉಳಿಯುತ್ತಾನೆ. ಕಾಡುಗೊಲ್ಲರಿಗೆ ನಾನು ತಂಗಿ ಗಂಗಾಮ್ಮಳನ್ನು ಕೊಟ್ಟರೆ ಕುಲಕೆಡುತ್ತೆ ಎಂದು ಯೋಚಿಸಿದ, ಅಲ್ಲಿಯು ವರ್ಗ ವ್ಯವಸ್ಥೆ ಅತಿ ಮುಖ್ಯವಾಗಿತ್ತು ಎಂಬುದು ತಿಳಿಯುತ್ತದೆ. ಕೆಳ ವರ್ಗದ ದವರಿಗೆ ಹೆಣ್ಣು ಕೊಡುವುದು ನಿಷಿದ್ದವಾಗಿತ್ತು. ತುಂಬಾ ದಿನಗಳವರೆಗೆ ತಂಗಿಯನ್ನು ಕರೆ ತರದಿದ್ದುದನ್ನು ನೋಡಿ ಅವರೆ ಅಂತರ ದೃಷ್ಟಿಯಿಂದ ಬ್ರಾಹ್ಮಣನ ಅಂತರಂಗವನ್ನು ಅರ್ಥ ಮಾಡಿಕೊಂಡ ಇವರು ತಾತನ ಕುರಿಕೊಯ್ದು ಮಾಂಸದ ಎಡೆ ಮಾಡಿ ಕೊಬ್ಬನ್ನು ತುಪ್ಪವನ್ನಾಗಿ ಮಾಡಿ ಅವರ ವ್ರತ ಕೆಡಿಸಬೇಕೆಂದು, ಆಮೇಲೆ ಅವಳ ತಂಗಿಯನ್ನು ಮದುವೆ ಮಾಡಿಕೊಳ್ಳಬೇಕೆಂದು ಹಾಗೆ ಮಾಡಿದರು, ಬ್ರಾಹ್ಮಣರು ಮಾಂಸವನ್ನು ತಿನ್ನುತ್ತಿರಲಿಲ್ಲ. ಅದು ಕೆಳವರ್ಗದವರ ಆಹಾರ ಅಂದುಕೊಂಡಿರುವುದನ್ನು ಕಾಣಬಹುದು. ಬ್ರಾಹ್ಮಣ ತಿಂದ, ಆಗ ಸಿತ್ತೂರು ದೇವರು ಕಾಟುಮದೇವರು ಕುದುರೆ ಹತ್ತಿ ಮನೆಯಗವಾಕ್ಷಿವೊಳಗಾಗಿ ಕುದುರೆ ಇಳಿಸಿದ್ದು, ಬ್ರಾಹ್ಮಣನಿಗೆ ನಿನ್ನ ತಂಗಿಯನ್ನ ಮದುವೆ ಮಾಡಿದರೆ ಕುಲಕೆಡುತ್ತೆ ಮಾಂಸವನ್ನು ತಿಂದರೆ ಕುಲ ಕೆಡುದಿಲ್ಲವಾ? ಎಂದು ಹೇಳಿ ನಿಜ ಸಂಗತಿಯನ್ನು ತೋರಿಸಿದಾಗ ಬ್ರಾಹ್ಮಣ ತನ್ನ ತಪ್ಪನ್ನು ಒಪ್ಪಿಗೊಂಡು ತಂಗಿ ಗಂಗಮಾಳಮ್ಮನ್ನು ಮದುವೆ ಮಾಡಿಕೊಳ್ಳಿ ಎಂದು ಬೊಮ್ಮಯ್ಯ ಲಿಂಗ ತಂಗಿಯನ್ನು ಕಳುಹಿಸಿದ.

"ಸಿತ್ತುರು ದೇವುರಿಂದೆ

ಕಳಿಸಿವುದೋ ಸ್ವಾಮಿಗೆ

ಅದೇ ಸಿತ್ತುನುಗಿರಿ ಕಾಡಿನೊಳಗಣ್ಣ

ಶಿವನು ಪಾರ್ವತಿ ಇಳಿದೂ

ತಾಯಿ ಗಂಗಮಾಳಮ್ಮನ

ಸಿತ್ತುರು ದೇವುರಿಗೆ ಕೊಟ್ಟು

ಮದುವೆ ಮಾಡಿದುರಯ್ಯ ಗಳಿಗಾಗೋ"[37]

ಹೀಗೆ ಬ್ರಾಹ್ಮಣ ಹುಡುಗಿಯನ್ನ ಮದುವೆಯಾಗುವುದರ ಮೂಲಕ ನಾವು ಯಾರಗೂ ಕಡಿಮೆ ಇಲ್ಲ ಎಂಬುದನ್ನು ತೋರಿಸಿದರು. ಈ ಕಾವ್ಯದ ಸಂದಿನಲ್ಲಿ ಬಳಸುವ ಗಳಿಗಾಗೋ ಎನ್ನವ ಉಕ್ತೆ ವಿಶಿಷ್ಟವಾಗಿದೆ. ಅವರು 'ಒಳ್ಳೆಯ ಸಮಯ' ಇದು ಎಂದು ಹೇಳುವುದಿರಬೇಕು. ಹೀಗೆ ಸಿತ್ತುರು ದೇವರಿಗೆ ಶಿವ ಪಾರ್ವತಿ ಮದುವೆಯನ್ನು ಮಾಡಿ ಕೈಲಾಸಕ್ಕೆ ಹೋಗುವಾಗ ಈ ಸಂದು ಮುರಿಯುತ್ತದೆ.

### ಗೊಲ್ಲರ ಕುಲದ ಹುಟ್ಟಿನ ಸಂದು

ಈ ಸಂದಿನಲ್ಲಿ ಇವರು ಎಲ್ಲಾ ದೇವರನ್ನು ಪೂಜಿಸುತ್ತಿದ್ದರು. ಎಂಬುವುದಕ್ಕೆ ಸಾಕ್ಷಿಯಾಗಿ ಶ್ರೀವಿಷ್ಣು ಲಕ್ಷ್ಮಿಯ ಪ್ರಸ್ತಾಪ ಇರುವುದನ್ನು ಕಾಣಬಹುದು ವಿಷ್ಣು ಲಕ್ಷ್ಮಿಗೆ, ಮುಂದೆ ಬರುವ ಕಂಸಾಸುರನ ಕೊಲ್ಲೋದಕ್ಕೆ ಕೃಷ್ಣನ ಅವತಾರ ಎತ್ತಬೇಕು, ಎಂಬುವುದನ್ನು ಹೇಳಿತ್ತಾ ಸಂವಾದದ ಮೂಲಕ ಪ್ರಾರಂಭವಾಗಿ ಮುಂದೆ ಗೊಲ್ಲರ ಕುಲ ಹೇಗೆ ಹುಟ್ಟುತ್ತದೆ, ಎಂಬುದನ್ನು ಲಕ್ಷ್ಮಿ ಹೇಳಿದಾಗ ಹೇಗೆ ಎಂದು ಕೇಳುತ್ತಾಳೆ. ವಿಷ್ಣು ಗೋವರ್ಧನ ಗಿರಿ ಎಂಬ ಕಾಡಲ್ಲಿ ಬೆಟ್ಟವಿದೆ. ಗೋವರ್ಧನ ಗಿರಿ ಊರೊಳಗೆ ಒಬ್ಬ ಮಹಾರಾಜನ ಮನೆಯಲ್ಲಿ ನೀನು ಮಗಳಾಗಿ ಹುಟ್ಟಿ ನಾನು ಒಬ್ಬ ಬಡವನ ಮನೆಯಲ್ಲಿ ಹುಟ್ಟುತ್ತೇನೆ ಮುಂದಿನ ಕತೆಯನ್ನು ಆಮೇಲೆ ಪ್ರಾಯಕ್ಕೆ ಬಂದಾಗ ಹೇಳುತ್ತೇನೆ, ಎನ್ನುವಾಗ ಲಕ್ಷ್ಮಿ ಆಗಲಿ ಎಂದು ಗೋವರ್ಧನ ಗಿರಿಯ ರಾಜನಿಗೆ ಮಕ್ಕಳಿರಲಿಲ್ಲ. ಅವನಿಗೆ ಮಗಳಾಗಿ ಹುಟ್ಟುತ್ತಾಳೆ. ವಿಷ್ಣು ಬಡವನ ಮನೆಯಲ್ಲಿ ಮಗನಾಗಿ ಹುಟ್ಟುತ್ತಾನೆ. ಇಲ್ಲಿ ಹೆಣ್ಣು ಶ್ರೀಮಂತರ ಮನೆಯಲ್ಲಿ ಹುಟ್ಟಬೇಕು. ಎಂಬುವುದಾಗಿ ಬಡವರ

---

[37] ಚಲುವರಾಜು, ಬುಡಕುಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 22

ಮನೆಯಲ್ಲಿ ಮಗಳನ್ನು ಮದುವೆ ಮಾಡಲು ಸಾಕಲು ಕಷ್ಟವಾಗುತ್ತದೆ ಎಂಬ ಕಲ್ಪನೆಯಾಗಿರಬೇಕು.

ಮಹಾಲಕ್ಷ್ಮಿ ಬೆಳೆದು ಋತು-ಮತಿಯಾದಳು ಸೂತಕ ಕಳೆದು ಅವಳನ್ನು ಅಲಂಕರಿಸಿ ತೂಕಕಿಟ್ರೆ ಅವಳು ಒಂದು ಮಲ್ಲಿಗೆ ಹೂತೂಕ ಇದ್ದಳು. ಇಲ್ಲಿ ಹೆಣ್ಣಿನ ಮೈತೂಕದ ಮೇಲೆಯು ಅವರು ಅವಳ ಚಾರಿತ್ರವನ್ನು ಕಂಡು ಹಿಡಿಯುತ್ತಿದ್ದರು ಎಂದೆನಿಸುತ್ತದೆ. ಹಾಗೆಯೇ ಹೆಣ್ಣಿಗೆ ತುಂಬಾ ಕಟ್ಟುನಿಟ್ಟು ಇದ್ದಂತಹ ಕಾಲ ಅವಳನ್ನು ಮಹಡಿ ಮನೆಯ ಮೇಲೆ ಇರಿಸಿ ಕಾವಲು ಇದ್ರು, ಮಹಡಿ ಮೇಲಕ್ಕೆ ಶ್ರೀಕೃಷ್ಣ ಯಾರೀಗು ತಿಳಿಯದ ಹಾಗೆ ಬರುತ್ತಿದ್ದ. ಅವಳು ಗರ್ಭಿಣಿ ಆದಳು.

"ಎರಡು ಮಲ್ಲಿಗೆ

ಹೂವಿನ ತೂಕವಾದಳು

ಮಹಾಲಕ್ಷ್ಮಿ

ಮಹಾರಾಜನ

ಮನಿಯಾಗೆ ಗಳಿಗಾಗೋ"[38]

ಈ ವಿಷಯವನ್ನು ತಿಳಿದ ಅವರ ತಂದೆ ಅರಮನೆಸುತ್ತ ಬಿಸುಗತ್ತಿ ಕಾವಲಿದ್ದು, ನನ್ನ ಮಗಳು ಇಂತಹ ಕೆಲಸವನ್ನು ಮಾಡಿದ್ದಾಳೆ ಎಂದು ಅವಳನ್ನು ಕಣ್ಣು ಕಟ್ಟಿ ಕಾಡಿಗೆ ಬಿಡುವುದಕ್ಕೆ ತಯಾರಿ ನಡೆಸುತ್ತಾನೆ. ಈ ವಿಷಯವನ್ನು ಶ್ರೀಕೃಷ್ಣ ಮಹಾಲಕ್ಷ್ಮಿಗೆ ಹೇಳುತ್ತಾನೆ. ಅವನೊಂದು ಉಪಾಯವನ್ನ ಹೇಳಿ ಕೊಡುತ್ತಾನೆ. ಅದರಂತೆ ಅವಳನ್ನು ಕಾಡಿಗೆ ಕಳುಹಿಸಲು ವ್ಯವಸ್ಥೆ ಮಾಡಿ ಹೊರಡಿಸುವಾಗ ಅಪ್ಪಾಜಿ ನಾನೊಂದು ಮಾತು ಹೇಳಬೇಕು ಎಂದಳು ಹಾಗ ಅವರಪ್ಪನಿಗೆ ನನ್ನನ್ನು ಮಹಡಿ ಮೇಲೆ ಬೀಸುಗತ್ತಿ ಕಾವಲು ಇಟ್ಟದ್ರಿ ನಾನು ಮಾಯದ ಬಸಿರಾಗಿರೊದು ಎಂದು ಹೇಳಿ ನಂಬಿಕೆ ಇಲ್ಲದಿದ್ದಾರೆ ಗೋವರ್ಧನಗಿರಿ ಬೆಟ್ಟದಾಗಿರೂ ವಿಷ್ಣುವಿನ ಹಸುವಿನ ಪಡ್ಡೆಕರುವನ್ನ ಹಿಡಿದುಕೊಂಡು ಬಂದು ನೆಲಮಳಿಗೆಯಲ್ಲ ಬೇಕಾದರೆ ಕೊಡಿಹಾಕಿ ಮೂರು ತಿಂಗಳಾದ ಮೇಲೆ ತೆಗೆದು ನೋಡಿ ಎಂದಳು ಅದರಂತೆ ಅದು ಮೂರು ತಿಂಗಳ ಗರ್ಭಿಣಿಯಾಗಿತ್ತು. ಇದರಿಂದ ರಾಜ ನನ್ನ ಮಗಳ ಮಾತು ನಿಜ ಎಂದು ಅವರಿಬ್ಬರನ್ನು ಸುಖವಾಗಿ ಸಾಕುತ್ತಿದ್ದರು.

---

[38] ಚಲುವರಾಜು, ಬುಡಕುಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 25

ಹಸುವಿನ ಕರುವು ಗಂಡು ಮಗುವನ್ನ ಹಡೆಯಿತು. ಅದಕ್ಕೆ 'ಸನ್ಮತ್ತಿ' ಎಂದು ಹೆಸರಿಟ್ಟರು. ಮಹಾಲಕ್ಷ್ಮಿ ಹಡೆದ ಮಗುವಿಗೆ 'ಸಿಕ್ಕಿಮುತ್ತಿ' ಎಂದು ಹೆಸರಿಟ್ಟರು, ಮನುಷ್ಯರಲ್ಲಿದೆ ಗಂಡು ಮಗುವನ್ನು ಹಡೆದ ಪಡ್ಡೆ ಕರುವನ್ನು ನೋಡಿದಾಗ ಇದು ಅಸಹಜವಾದುದು ಕಾಡುಗೊಲ್ಲರು ಗೊಲ್ಲಕುಲ ಹಸುವಿನಿಂದಲು ಸಹ ಹುಟ್ಟಿದೆ ಎಂದು ತಮ್ಮ ಕುಲದ ಹಿರಿಮೆಯನ್ನು ತೋರಿಸಿಕೊಳ್ಳವುದಕ್ಕೆ ಎನುಸುತ್ತದೆ. ಆ ಮೇಲೆ ಕರು ಮಹಾಲಕ್ಷ್ಮಿ ಕೆಲವಾರು ದಿನಗಳಲ್ಲಿ ಗರ್ಭಿಣಿಯಾಗಿ ಎರಡು ಹೆಣ್ಣು ಮಕ್ಕಳನ್ನು ಹಡೆದರು. ಮಕ್ಕಳು ಪ್ರಾಯಕ್ಕೆ ಬಂದ ಮೇಲೆ ಮಹಾಲಕ್ಷ್ಮಿ ಮಗನಿಗೆ ಹಸುವಿನ ಕರುವಿನ ಮಗಳನ್ನ ಹಸುವಿನ ಕರುವಿನ ಮಗನಿಗೆ ಮಹಾಲಕ್ಷ್ಮಿಯ ಮಗಳನ್ನು ಮದುವೆ ಮಾಡಿದರು. ಇಲ್ಲಿಯು ಅಸಹಜ ರೀತಿಯ ಮದುವೆಯನ್ನು ನೋಡುತ್ತವೆ. ಹೀಗಿರುವಾಗ ಸಿತ್ತುರುದೇವರು ಕಾಟುಮದೇವರು ಗೋವರ್ಧನ ಗಿರಿಯ ಮಹಾರಾಜನ ಹತ್ತಿರ ಬಂದು ನಮಗೆ ಪೂಜೆ ಮಾಡೊಕೆ ಪೂಜಾರಿ ಇಲ್ಲ ನಿಮ್ಮ ಮಕ್ಕಳನ್ನ ಕಳುಹಿಸಿಕೊಡಿ ಎಂದಾಗ ರಾಜ ಕಳುಹಿಸಿಕೊಟ್ಟ ಅವರನ್ನು ಕರೆ ತಂದ ದೇವರುಗಳು ಕಾಡಿಗೋಗಿ ಗುಡಿಸಲು ಕಟ್ಟೆ ಅದಕ್ಕೆ ಕಾರೇ, ಮುಳ್ಳು ಕವಳೆ ಮುಳ್ಳು ಹಾಕಿ ಬೇಲಿ ಹಾಕಿ ಇಟ್ಟರು. ಸಣ್ಣೇರು ಗೊಲ್ಲರು ಕಾಟುಮುಲಿಂಗಾನ ಪೂಜಾರಿ ಕಲ್ಡೇರು ಗೊಲ್ಲರ ಸಿಕ್ಕೆ ಮುತ್ತಿ ಸಿತ್ತುರು ದೇವರ ಪೂಜಾರಿ ಇವರಿಬ್ಬರಿಗೂ ಮಕ್ಕಳಾಗಲಿಲ್ಲ. ಆ ಮೇಲೆ ಎರಡು ಪಂಗಡವಾದ ಮೇಲೆ ಸಿತ್ತುರು ದೇವರನ್ನು ಎರಡು ಭಾಗ ಮಾಡಿ ಪೂಜಿಸಿದರು. ಅವರೊಟ್ಟೆಯೊಳಗೆ ದ್ಯಾವುರು ದೈಮಾರನೆಂಬ ಮಗ ಹುಟ್ಟಿದ ಇವನಿಗೆ ಇಬ್ಬರು ಗಂಡು ಮಕ್ಕಳು ಹುಟ್ಟಿದರು. ಕರಿಯಲ್ಲಿ, ಕೆಂಪಲ್ಲಿ, ಇವರಿಗೇಳು ಗಂಡು ಮಕ್ಕಳುಟ್ಟಿದರು ಕರಿಯಲ್ಲಿ ಅನ್ನೊನಿಗೆ ಒಬ್ಬನೆ ಮಗ, ಕೆಂಪಲ್ಲಿಗೆ ಆರು ಜನ ಗಂಡು ಮಕ್ಕಳು, ಆರುಜನಕ್ಕೆ ಮದುವೆ ಮಾಡಿದರು. ಮಕ್ಕಳಾಗಲಿಲ್ಲ. ಗೌರಸಂದ್ರದ ಮಾರಿ ಕಣಿ ಹೇಳುತ್ತಾ ನಿಮ್ಮ ವಂಶದ ಕರಿಯಲ್ಲಿಯ ಮಗ ಮಾರುಮುತ್ತಣ ಕಾಡಿನಲ್ಲಿವನೆ ಅವನನ್ನು ಹುಡುಕಿ ಮದುವೆ ಮಾಡಿ ನಿಮ್ಮ ವಂಶ ಬೆಳೆಯುತ್ತಿದೆ. ಎಂದಳು ಮದುವೆ ಮಾಡುವುದಕ್ಕೆ ಕಾಡಿಗೆ ಹೋಗಿ ಅಲ್ಲಿ ಹುಡುಕಿ ನಿನಗೆ ಮದುವೆ ಮಾಡುತ್ತಿವೆಂದು ಹೇಳಿದರೆ ಅವನು ನಾನು ಊರಿನ ಮುಖ ಕಾಣದವನು ನಾನು ವಿಕಾರವಾಗಿದ್ದಿನಿ ನನಗೆ ಯಾರು ಹೆಣ್ಣು ಕೊಡುತ್ತಾರೆ ಬೇಡ ನಾನು ಊರಿಗೆ ಬರೊದಿಲ್ಲ. ಎಂದು ವಾದ ಮಾಡಿದಾಗ ಹೋಗಲಿ ನಿನ್ನ ಬಾಕನ್ನಾದರು ಕೊಡು ಎಂದು ಕೇಳಿ ತರುತ್ತಾರೆ. ಕಾಟುಮದೇವರ ಪೂಜಾರಿ ಸಣ್ಣ ಮುತ್ತಪ್ಪನ ಮಗಳ

"ಈಗ ಎಲ್ಲಾರಿಗೂ

ಹಿರಿಯೋನು ಹಿರಿಯಣ್ಣ

ಪಟ್ಟೇದಟ್ರೇ ಅಂಬೋನು

ಈ ಕಬ್ಬಿಣುದು ಬಾಕು

ಕೈಯೊಳು ಹಿಡುಕಂಡು

ಎಲ್ಲಾ ಶಾಸ್ತ್ರಗಳು

ಅವುನೆ ಮಾಡಿದನಯ್ಯೋ ಗಳಿಗಾಗೋ!"[39]

ಸಾತಮ್ಮನನ್ನ ಮಾರಿಮುತ್ತನ ಬಾಕಿಗೆ ಮದುವೆ ಮಾಡಿದರು ಇಲ್ಲಿಯು ಕಾಡುಗೊಲ್ಲರಲ್ಲಿ ಮದುವೆಯನ್ನ ಗಂಡು ಉಪಯೋಗಿಸುವ ಆಯುಧಕ್ಕೆ ಮದುವೆ ಮಾಡುವ ಸಂಪ್ರದಾಯವಿತ್ತು ಎನಿಸುತ್ತದೆ. ಸಾತಮ್ಮ ಗಂಡನ ಮನೆಗೋದ ಮೇಲೆ ಅವರು ಅವಳಿಗೆ ತುಂಬಾ ಕಷ್ಟ ಕೊಡುತ್ತಾರೆ.

ಒಂದು ದಿನ ಅವರ ಮಾವಂದಿರನ್ನು ಕೇಳುತ್ತಾಳೆ ಗಂಡನಿಗೆ ಬುತ್ತಿ ಇಟ್ಟ ಬತ್ತೀನಿ ನನ್ನ ಗಂಡ ಇರೋ ಜಾಗ ತೋರಿಸಿ ಎಂದು. ಇವಳು ಹೋದರೆ ನಮ್ಮ ಹೆಂಡತಿಯರು ಕೆಲಸ ಮಾಡಬೇಕಾಗುತ್ತದೆ ಎಂದು ಅವನು ಗೆಡ್ಡೆಗೆಣಸು ತಿನ್ನೋನು ಊಟ ಮಾಡೋದಿಲ್ಲ ಎಂದು ಹೇಳಿದರು. ಆದರೂ ಇವರ ಕಷ್ಟಗಳನ್ನ ಸಹಿಸಲಾರದೆ ಅವಳು ಬುತ್ತಿಯನ್ನ ತೆಗೆದುಕೊಂಡು ಕಾಡಿಗೆ ಹೋಗಿ ಗಂಡನನ್ನ ಹುಡುಕಲು ಸುರು ಮಾಡಿದಳು. ಇವಳ ಕಷ್ಟ ನೋಡಲಾರದ ಗೌರಸಂದ್ರದ ಮಾರಮ್ಮ ಹಾದಿಯನ್ನು ತೋರಿಸಿದಳು ಸಲಹೆ ಕೊಟ್ಟಳು ಅದರಂತೆ ನಡೆದುಕೊಂಡು ಒಂದು ದಿನ ಗಂಡ ಇವಳನ್ನು ನೋಡಿ ಹೆಂಡತಿ ಎಂದು ಗೊತ್ತಾಗಿ ಒಟ್ಟಿಗೆ ಬಾಳುವೆ ನಡೆಸುತ್ತಾರೆ. ಇವಳು ಗರ್ಭಿಣಿಯಾಗಿ ಪ್ರಸವದೇವನೆ ಕಾಣಿಸಿಕೊಂಡಾಗ ಹೆರಿಗೆ ಸೂತಕ ನನ್ನ ಮೇಲೆ ಬೀಳುವ ಆಗಿಲ್ಲವೆಂದು ಗಿಡದ ಮೆರೆಗೆ ಕುಳಿತುಕೊಂಡ. ಇದು ಕಾಡುಗೊಲ್ಲರಲ್ಲಿ ಸಂಪ್ರದಾಯವಾಗಿ ಬಂದಿರುವುದು ಎನಿಸುತ್ತದೆ. ಇವಳು ಗುಡಿಸಲೊಳಗೆ ಒಬ್ಬಳೆ ಗೋಳಾಡ್ತಾಳೆ ಪಾರ್ವತಿಯ ದಯೆಯಿಂದ ಹೆರಿಗೆಯಾಗುತ್ತದೆ. ಕಾಡಿನಲ್ಲಿ ಇರುವಾಗ ಒಮ್ಮೆ ಗಂಡನ ಜೋತೆ ಮಗುವನ್ನು ಜೋಳಿಗೆಯಲ್ಲಿ ಕಟ್ಟಿ ಹಣ್ಣು ಜೇನನ್ನು ಹುಡುಕಿಕೊಂಡು ಬಹು ದೂರದವರೆಗೆ ಹೋಗುತ್ತಾರೆ. ಮಗುವಿನ ನೆನಪಾದಾಗ ಗಾಬರಿಯಿಂದ ಬರುವಾಗ ಮಗುವನ್ನು ಕರಡಿ ಹುಲಿ ತಿನ್ನದೆ ಬಿಡವು ಎಂದು ಬೆಟ್ಟದ ಮೇಲೆ ಗೋಳಾಡುವಾಗ ಜಾರಿ ಬಿದ್ದು ಪ್ರಾಣ ಕಳೆದುಕೊಳ್ಳತ್ತಾರೆ.

---

[39] ಚಲುವರಾಜು, ಬುಡಕಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 50

ಹೀಗೆ ಗೊಲ್ಲರ ವಂಶ ಮುಂದುವರಿಯುತ್ತದೆ. ಶಿವ ಇವರಿಗೆ ನೆರವಾಗಿರುವುದನ್ನ ಗೌಡಸಂದ್ರದ ಮಾರಕ್ಕೆ ಬಂದು ಸಹಾಯ ಮಾಡುವುದು, ಕಣಿ ಹೇಳುವುದು ಸತ್ಯ ಎಂದು ಇವರು ಅದನ್ನ ಅನುಸರಿಸಿ ಹೋಗುವುದನ್ನು ನೋಡಬಹುದು.

**ಕೆಂಗರು ಮಲ್ಲೇಗೌಡನ ಸಂದು**

ಪಾರ್ವತಿ ಪರಮೇಶ್ವರರು ಲೋಕ ಸಂಚಾರ ಮಾಡುತ್ತಾ ಬೆಟ್ಟದ ಹತ್ತಿರ ಬಂದಾಗ ಮಾರು ಮುತ್ತಣ್ಣ, ಸಾತೆಮ್ಮನ ಶವಗಳು ತಪಸ್ಸು ಮಾಡುತ್ತಿದ್ದವು. ಎಂದು ಅದಕ್ಕೆ ಬೆತ್ತದಿಂದ ಹೊಡೆದಾಗ ಪ್ರಾಣ ಬಂದಿತಂತೆ ಎಲ್ಲಿಯೂ ಕಾಣದ ಒಂದು ವಿಚಿತ್ರ ಅಂಶವನ್ನು ಇಲ್ಲಿ ಗುರುತಿಸಬಹುದು ಶವ ಅಗೋದು ಪ್ರಾಣ ಹೋದ ಮೇಲೆ, ಆದರೆ ಇಲ್ಲಿ ಶವಗಳು ಅನ್ನುವುದರ ಅರ್ಥ ಚಲನೆ ಕಳೆಕೊಂಡು ಶರೀರ ಎಂದಿರಬೇಕು. ಪ್ರಾಣ ಬಂದಾಗ ಇವರು ನಮಗೆ ಈ ಜನ್ಮ ಸಾಕು ಎಂದು ಕೇಳಿಕೊಂಡಾಗ ಶಿವ ಸಾತೆಮ್ಮನ ಬಾಯಿ ತೆರೆಸಿ ಮುತ್ತರತ್ನದ ಗಂಟನು ಇಟ್ಟು ಹದಿನೈದು ದಿನ ಸ್ವಾತಿಯ ಮಳೆಯಾಗಿ ಸುರಿ ಎಂದು ಇನ್ನೋಂದು ದವಡೆಗೆ ವಿಷದ ಗಂಟನ್ನು ಇಟ್ಟು ಇನ್ನು ಹದಿನೈದು ದಿನ ವಿಸಾತಿ ಮಳೆಯಾಗಿ ಸುರಿ ಎಂದು ಹೇಳಿದನಂತೆ ಇದು ಜನಪದ ಖಂಡ ಕಾವ್ಯ ಉತ್ತರದೇವಿಯ ಪ್ರಸಂಗವನ್ನು ಉತ್ತರೆ ಮಳೆಯಾಗಿ ಸುರಿದ ರೀತಿ ನೆನಪಿಸುತ್ತದೆ. ಮಾರಿ ಮುತ್ತಣನನ್ನು ಹೂವಿನ ತೋಟಕ್ಕೆ ನೀರು ಹಾಕು ಎಂದು ಕೈಲಾಸಕ್ಕೆ ಕಳುಹಿಸಿದ.

ಪಾರ್ವತಿ ಪರಮೇಶ್ವರರು ಬರುವಾಗಿ ಜೋಲಿ ಒಳಗಿದ್ದ ಸಾತೆಮ್ಮನ ಮಗು ಅಳುವ ಶಬ್ಧ ಕೇಳಿಸಿ ಬಂದು ನೋಡಿ ಇದು ಸಾತೆಮ್ಮನ ಮಗು ಎಂದುಕೊಂಡು ಆ ಮಗುವಿನ ಜೋಲಿಯನ್ನು ಶಿವ ಆಲದ ಮರಕ್ಕೆ ಹತ್ತಿಕಟ್ಟಿ

"ಕೆಂಗರು ಮಲ್ಲೇಗೌಡನಿಗೆ
ಏಳೆಡೆ ಸರ್ಪ ಗರುಡ
ಕಾವಾಲಿರುವಣ್ಣ ಗಳಿಗಾಗೋ"[40]

ಕಾಳಿಂಗನಿಗೆ ಅವರ ಸಂಬಂಧಿಕರು ಬರುವವರೆ ಕಾವಲಿರು ಎಂದು ಹೇಳಿ ಮಗುವಿಗೆ ಹಸಿವಾದಗ ನೀನು ಜೇನನ್ನು ಕುಟುಕು ಎಂದು ಗರುಡನಿಗೆ ಹೇಳಿ ಹೋದರು.

---

[40] ಚಲುವರಾಜು, ಬುಡಕುಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 24.

ಈ ದಾರಿಯಲ್ಲಿ ಗೌರಸಂದ್ರದ ಮಾರಮ್ಮ ಬರುವಾಗ ಮಗುವಿನ ಅಳು ಕೇಳಿಸುತ್ತದೆ. ಅಲ್ಲಿ. ನೋಡಿದಾಗ ಅವಳಿಗೆ ಇದು ಮಾರುಮುತ್ತಣ್ಣನ ಮಗು ಎಂದು ತಿಳಿದು, ಇದನ್ನು ಅವರ ದೊಡ್ಡಪ್ಪರಿಗೆ ಸಾಕುವುದಕ್ಕೆ ಹೇಳಿದರೆ ಅವರಿಗೂ ಒಳ್ಳೆಯದಾಗುತ್ತದೆ ಎಂದು ಅವಳು ಒಂದು ಮೂಗು ಮಗುವಿನ ಮೇಲೆ ಹೋದಳು, ಅದು ಹೋದಾಡುವಾಗ ದೆವ್ವ ಬಂದಿದೆ. ಎಂದು ಕಸಬರಕೆಯಿಂದ ಹೊಡೆದರು ಕೋಪಿಸಿಕೊಂಡು ನೋಡಿದಾಗ ಅವರಿಗೆ ವಾಂತಿಬೇದಿ ಸುರುವಾಯಿತು. ಇದಕ್ಕೆನು ಕಾರಣವೇನು ಎಂದು ಮಾರಮ್ಮನ ಕಣಿ ಕೇಳುವ ಎಂದು ದೊಡ್ಡ ಮಾರಣ್ಣ ಬಂದಾಗ ವಿಷಯವನ್ನು ಮಾರಮ್ಮ ಹೇಳಿದಳು. ಮಗುವಿನ ಸೂತಕ ತೆಗೆಯಬೇಕು. ಸಂಪ್ರದಾಯದಂತೆ ಜನ್ನಿಗೆ ಮರಿಯ ಹಾಲನ್ನು ಕುಡಿಸಬೇಕು ಎಂದು ಚಿಕ್ಕ ಪ್ರಾಯದ ಸಿತ್ತಮ್ಮ ನನ್ನ ತಾಯಿಯ ಸ್ಥಾನದಲ್ಲಿ ಕೂರಿಸಿ ಶಾಸ್ತ್ರ ಮಾಡಿ ಮನೆಗೆ ಕರೆದುಕೊಂಡು ಹೋದರು. ಕೆಂಗರು ಮಲ್ಲೇಗೌಡ ಎಂದು ನಾಮಕರಣ ಮಾಡಿದರು.

ಕೆಂಗರು ಮಲ್ಲೇಗೌಡನನ್ನು ಚನ್ನಾಗಿ ಸಾಕುತ್ತಿದ್ದರು. ಅವನ ದೊಡ್ಡಪ್ಪಂದಿರು ಹೀಗಿರುವಾಗ ಅವರ ಹೆಂಡತಿಯರು ಗರ್ಭಿಣಿಯಾದರು. ಮಕ್ಕಳು ಹುಟ್ಟಿದರು. ಈ ಹುಡುಗನನ್ನು ಇಲ್ಲಿ ಇಟ್ಟುಕೊಂಡುರೆ ಉಂಡೆ ಭಾಗ ಅವನಿಗೆ ಕೊಡ ಬೇಕಾಗುತ್ತದೆ, ನಮ್ಮ ಮಕ್ಕಳಿಗೆ ಕಡಿಮೆಯಾಗುತ್ತದೆ. ಎಂದು ಯೋಚಿಸಿ ನಾಲ್ಕು ವರ್ಷದ ಹುಡುಗನನ್ನು ಕಾಡಿನಲ್ಲಿ ಯಾವುದಾದರೂ ಪ್ರಾಣಿ ಸಾಯಿಸಲಿ ಎಂದು ದನಗಳನ್ನ ಮೇಯಿಸುವುದಕ್ಕೆ ಕಳುಹಿಸುತ್ತಾರೆ. ನಾಲ್ಕು ವರ್ಷದವನಿಗೆ ಐದು ವರುಷವಾಗುತ್ತದೆ. ಇವನು ಬದುಕಿರುವುದನ್ನ ನೋಡಿ ಹಿರಿಯೂರು ಜಾತ್ರೆಯಲ್ಲಿ ಮುತ್ತು-ರತ್ನ ಮಾರುವುದನ್ನು ಕಲಿಸುತ್ತವೆ ಎಂದು ಕರೆದುಕೊಂಡು ಹೋಗಿ ಕಾಡಿನಲ್ಲಿ ಮಧ್ಯರಾತ್ರಿಯಲ್ಲಿ ಬಿಟ್ಟು ಬಂದರು. ಮನುಷ್ಯನಿಗೆ ಆಸೆಯನ್ನುವುದು ದುರಾಸೆಯಾಗಿ ತಮ್ಮ ವಂಶ ಬೆಳೆಯುವುದಕ್ಕೆ ಕಾರಣವಾದ ಹುಡುಗನಕ್ಕೆ ಕಾಡು ಪಾಲು ಮಾಡಿದ ಮನುಷ್ಯನ ನೀಚ ಬುದ್ಧಿಯನ್ನು ಕಾಣಬಹುದು.

ಕೊಂಕಿ ಜರುಮಲೆ ಸೀಮೆಯ ಅಂಬೆರಾಯ, ತುಂಬೆರಾಯ ಏಳುಗೂಡಿನ ದನಗಳನ್ನು ಹೊಂದಿದ್ದರು. ಇವರು ಕಾಲಸಹಿತ ಕೈಲಾಸಕ್ಕೆ ಹೋಗುವುದಕ್ಕೆ. ಈ ದನಗಳನ್ನ ನೋಡಿಕೊಳ್ಳುವುದಕ್ಕೆ ವಾರಸುದಾರನನ್ನು ಉಡಿಕಿಕೊಂಡು ಈ ಮಾರ್ಗವಾಗಿ ಬರುತ್ತಿದ್ದರು. ಇಲ್ಲಿ ಮಲ್ಲೇಗೌಡ ಮಲಗಿದ್ದವನು ಎದ್ದು ನೋಡುದ ದೊಡ್ಡಪ್ಪಂದಿರು ಇಲ್ಲ, ಹುಲಿ, ಕರಡಿ ಪ್ರಾಣಿಗಳನ್ನು ನೋಡಿ ಕಿರುಚಿಕೊಂಡು ಹೋಗಿ ಒಂದು ಬೇಲಿಯಲ್ಲಿ ಸೇರಿ ಕೊಂಡಿರುತ್ತಾರೆ. ಈ ಶಬ್ಧವನ್ನು ಕೇಳಿದ ಅಂಬೆರಾಯ, ತುಂಬೇರಾಯ ಬಂದುನೋಡಿ ಈ ಮಗುವನ್ನು ಹೊರಗೆ

ತೆಗೆಯುತ್ತಾ ಅವನು ಯಾರು ಎಂಬುವುದನ್ನು ವಿಚಾರಿಸುತ್ತಾರೆ. ಹುಡುಗ ನಾನು ನಂದಗೋಕುಲ ವಂಶದವನು ನನ್ನ ದೊಡ್ಡಪ್ಪಂದಿರು ಹೀಗೆ ಮಾಡಿದರು ಎಂದು ಎಲ್ಲವನ್ನು ಹೇಳುತ್ತಾನೆ. ಹಾಗ ಇವರು ಇವನೆ ನಮಗೆ ಸರಿಯಾದ ವಾರಸುದಾರ ಎಂದು ತಿಳಿದು ಅವನನ್ನು ಕರೆದುಕೊಂಡು ತಮ್ಮ ಊರಿಗೆ ಬರುತ್ತಾರೆ. ಬಂದು ನೋಡಿದರೆ ಅಲ್ಲಿ ದನಗಳು ಕೊಟ್ಟಿಗೆಯಲ್ಲಿ ಇಲ್ಲ, ಎಲ್ಲಿ ಹೋಗಿವೆ ಎಂದು ಹುಡುಕಿಕೊಂಡು ಬರುತ್ತಾರೆ.

ಅಂಬೆರಾಯ, ತುಂಬೆರಾಯನ ದನಗಳು ಕಳುವರಳ್ಳಿಯ ಗೌಡ ಹೊನ್ನಟ್ಟಿ ಆಲೆಗೌಡನ ಅವರೆಯ ಹೊಲವನ್ನು ಮೇದಿರುತ್ತವೆ. ಅದಕ್ಕೆ ಅವನು ತಳವಾರನಿಗೆ ನೀನು ಹೊಡೆದುಕೊಂಡು ಹೋಗು, ನನ್ನ ದನಗಳು ಎಂದು ಬಂದಾಗ ಅವುಗಳಿಗೆ ಹಣವನ್ನು ಕಟ್ಟಿಸಿಕೊಂಡು ಬಿಡು ಎಂದು ಹೇಳಿರುತ್ತಾರೆ. ತಳವಾರ ಅವನ ಮನೆಯ ಕಾಂಪೌಂಡನಲ್ಲಿ ಕೂಡಿ ಹಾಕಿಕೊಂಡಿದ್ದನು. ಇಲ್ಲೂ ಸಹ ಹಾಡುಗಾರನ ಮೇಲೆ ಇಂಗ್ಲೀಷನ ಪ್ರಭಾವವಾಗಿರುವುದನ್ನು ಕಾಣುತ್ತೇವೆ. ಇಲ್ಲಿಗೆ ಬಂದ ಅಂಬೆರಾಯ ತುಂಬೇರಾಯ ದನ ಬಿಡಿ ಎಂದು ಕೇಳುವುದಕ್ಕೆ ಬಂದಾಗ ಇವನನ್ನ ಗೌಡನ ಹತ್ತಿರಕ್ಕೆ ಕಳುಹಿಸುತ್ತಾನೆ. ಆಗ ಗೌಡ ಇವರಿಗೆ ಬೈಯುತ್ತಾನೆ. ಆಗ ಅವರು ಇಂದಂತಹ ವಿಷಯವನ್ನು ಹೇಳಿದಾಗ ಅವನು ಅವರನ್ನು ಕ್ಷಮಿಸಿ ಎಂದು ಕೇಳಿಕೊಳ್ಳುತ್ತಾ ನಿಮ್ಮ ಹುಡುಗನನ್ನು ನನಗೆ ಕೂಡಿ ನನಗೆ ಮಕ್ಕಳಲ್ಲಿ ಎನ್ನುತ್ತಾರೆ. ಇವರು ಅವನು ಗೊಲ್ಲರ ಹುಡುಗ ನೀವು ಒಕ್ಕಲು ಮಕ್ಕಳು ಅವನನ್ನು ನೀವು ಸಾಕಬೇಕಾದರೆ ಗೊಲ್ಲರ ರೀತಿಯ ನೀತಿಯ ನಿಯಾಮಗಳಿಗೆ ನೀವು ನಿಮ್ಮ ಊರಿನವರು ಅನುಸರಿಬೇಕು ಎನ್ನುತ್ತಾರೆ. ನಿಮಗೆ ಮುಂದೆ ಮಕ್ಕಳಾದರೂ ಇವನನ್ನು ನಿಮ್ಮ ಹಿರಿಯ ಮಗ ಎಂದು ಹೇಳಬೇಕು ಎನ್ನುತ್ತಾರೆ. ಇದಕ್ಕೆಲ್ಲ ಒಪ್ಪಿಗೌಡ ಅವನನ್ನು ದತ್ತು ತೆಗೆದುಕೊಳ್ಳುತ್ತಾನೆ.

"ಆಗಲೆ ಭಗುವಂತೋ

ದೇವುರು ಕೃಪೆಯಿಂದ

ಒಕ್ಕಲು ಮಗನ ಮನೆಯೊಳಗೆ

ಕೆಂಗರು ಮಲ್ಲೇಗೌಡ ಇದ್ದಾನಣ್ಣ"[41]

ಮುಂದೆ ಮಲ್ಲೇಗೌಡ ದನಗಳಿಲ್ಲ ಎಂದು ದನಗಳನ್ನು ತರುವುದಕ್ಕೆ ಹೋಗಿ ಎಲ್ಲೂ ಸಿಗುವುದಿಲ್ಲ. ಹಾಗ ಅವರ ದೊಡ್ಡಪ್ಪಂದಿರ ಮನೆಗೆ ಹೋಗಿ ದನಗಳನ್ನು ತಂದು ಕಲ್ಯಾಣಿಗೆ

---

[41] ಚಲುವರಾಜು, ಬುಡಕುಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 93

ಎಸೆಯುತ್ತಾನೆ. ತಂದೆ ಮಗನಿಗೆ ಜಗಳವಾಗಿ ಅವರನ್ನು ಗೌಡನ ಹೆಂಡತಿ ಸಮಾದಾನ ಮಾಡಿ ಕರೆದುಕೊಂಡು ಹೋಗುತ್ತಾಳೆ. ಮೂರು ತಿಂಗಳಾದ ಮೇಲೆ ತಂದೆ ಉಸಾರು ತಪ್ಪಿದ ಮೇಲೆ ನಾನು ದನಗಳನ್ನು ತರುತ್ತೇನೆಂದು ಪಿಳ್ಳಿಂಗೊವಿಯಿಂದ ಊದಿ ಕಲ್ಯಾಣಿಯಲ್ಲಿಂದ ದನಗಳನ್ನು ಹೊಡೆದುಕೊಂಡು ಕುರುಬರ ಪದುಮಣ್ಣನ ಹೊಲದಲ್ಲಿ ಏಳಾಳುದ್ದ ಮೂಗುತ್ತದ ಮುಂದೆ ಕುಳಿತು ಆಲೇಗೌಡನಿಗೆ ಮಕ್ಕಳಾಗುವಂತೆ ದೇವರನ್ನು ಬೇಡಿಕೊಳ್ಳುತ್ತಾನೆ. ಅವರಿಗೆ ಅಪ್ರಾಪ್ತ ವಯಸ್ಸಿನಲ್ಲಿ ಮಕ್ಕಳಾಗುತ್ತವೆ. ಅವರಿಗೆ ಸಿಕ್ಯಾಲಪ್ಪ, ದೊಡ್ಡಾಪಲ್ಲ ಎಂದು ಹೆಸರಿಟ್ಟರು.

**ಕೆಂಗರು ಮಲ್ಲೇಗೌಡನ ಮದುವೆ ಸಂದು**

ಕೆಂಗರು ಮಲ್ಲೇಗೌಡ ಕಾಡಿಗೆ ಹೋಗಿ ಕುರುಬರ ಪದುವಣ್ಣನ ಹೊಲದಲ್ಲಿ ದನಗಳನ್ನು ಕಾಯ್ದುಕೊಂಡು ಇರುವಾಗ ಕಳುವರಳ್ಳಿಯಲ್ಲಿ ಆಲೇಗೌಡನ ಮಕ್ಕಳು ಮದುವೆ ವಯಸ್ಸಿಗೆ ಬಂದರು. ಒಂದು ದಿನ ಅವರ ತಂದೆಯ ಹತ್ತಿರ ನಮಗೆ ಮದುವೆ ಮಾಡಿ ಎಂದು ಕೇಳುತ್ತಾರೆ. ಆಲೇಗೌಡ ಹಿರಿಯ ಮಗನಿಗೆ ಮದುವೆ ಮಾಡದೆ ನಿಮಗೆ ಮದುವೆ ಮಾಡುವುದಿಲ್ಲ. ಎನ್ನುತ್ತಾನೆ. ಇಲ್ಲಿ ಒಕ್ಕಲಿಗರ ಆಲ್ಲೇಗೌಡ ತಾನು ಕೊಟ್ಟ ಮಾತನ್ನು ಉಳಿಸಿ ಕೊಂಡು ಬಂದು ಅವನಿಗೆ ಮಕ್ಕಳಾದರು ಅವರು ಎರಡನೇಯವರು ಎಂದು ಗಣನೆಗೆ ತೆಗೆದುಕೊಳ್ಳುವುದು ಅವನ ಹೃದಯ ವೈಶಾಲ್ಯವನ್ನು ತೋರಿಸುತ್ತದೆ.

ಆ ದಿನ ರಾತ್ರಿ ಗೌಡಸಂದ್ರದ ಮಾರಮ್ಮ ಆಲೇಗೌಡನಿಗೆ ನಿನ್ನ ಮಕ್ಕಳನ್ನು ಕಳುಹಿಸು ನಾನು ಅವರಿಗೆ ನಿನ್ನ ಹಿರಿಯ ಮಗನನ್ನು ತೋರಿಸುತ್ತನೆ. ಎಂದು ಹೇಳುತ್ತಾಳೆ. ಇಲ್ಲಿ ಗೌರಸಂದ್ರದ ಮಾರಮ್ಮ ಗೊಲ್ಲರಿಗಷ್ಟೆಯಲ್ಲ ಒಕ್ಕಲಿಗ ಆಲೇಗೌಡನಿಗೆ ಸಹಾಯ ಮಾಡುತ್ತಾಳೆ. ಇವಳು ಹೇಳಿದ ರೀತಿಯಲ್ಲಿ ಆಲೇಗೌಡ ಮಕ್ಕಳಿಗೆ ಬುತ್ತಿಯನ್ನು ಕಟ್ಟಿ ಕಳುಹಿಸುತ್ತಾನೆ. ಚಿಕ್ಕಪ್ರಾಯದ ಹುಡುಗಿಯಾಗಿ ಮಾರಮ್ಮ ಚಿಕ್ಕಾಲಪ್ಪ ದೊಡ್ಡಲಪ್ಪರಿಗೆ ದಾರಿಯನ್ನು ತೋರಿಸುವುದಕ್ಕೆ ಬಂದಾಗ ಅವನ್ನು ಅವರು ತಿರಸ್ಕರಿಸುತ್ತಾರೆ. ಆಗ ಮಾರಮ್ಮ ಬೆತ್ತವನ್ನು ತೆಗೆದುಕೊಂಡು ಓಡಿಸಿಕೊಂಡು ಹೋದಾಗ ಅವರು ಕುರುಬರ ಪದುಮಣ್ಣನ ಹೊಲದಲ್ಲಿದ್ದ ಕೆಂಗರು ಮಲ್ಲೇಗೌಡನ ಹತ್ತಿರ ಹೋಗಿ ಕಾಲಿಗೆ ಬಿದ್ದಾಗ ಇವನೆ ನಮ್ಮಣ್ಣ ಎಂದು ಗುರುತಿಸುತ್ತಾರೆ.

"ದಗಡಿ ಮಕ್ಕಳೀರಾ

ಯಾವಜಾತಿ ಯಾಊರೋ ನೀವು

ಬಂದು ನನ್ನ ಮುಟ್ಟಿದರೆಂದು

ಎದ್ದನು ಸ್ವಾಮಿ ಕೆಂಗರು ಮಲ್ಲಯ್ಯೋ"[42]

ಕಾಲಿಗೆ ಬಿದ್ದ ಇವರನ್ನು ಕಂಡು ಮಲ್ಲೇಗೌಡನು ಸಿಟ್ಟು ಬಂದು ಯಾವ ಜಾತಿಯವರೋ ನನ್ನನ್ನು ಮುಟ್ಟಿದರಲ್ಲ ಎಂದು ಅವರನ್ನು ಕೇಳಿದಾಗ ಅವರು ತಮ್ಮ ಪರಿಚಯ ಹೇಳಿದಾಗ ತಮ್ಮಂದಿರನ್ನು ತಬ್ಬಿ ಕೊಳ್ಳುತ್ತಾನೆ. ಅವರು ಬಂದ ವಿಷಯವನ್ನು ಹೇಳಿದಾಗ ನನಗೆ ಮದುವೆಬೇಡ, ನನಗೆ ಯಾರು ಹೆಣ್ಣು ಕೊಡುತ್ತಾರೆ. ನಾನು ಒಕ್ಕಲಿಗರ ಮನೆಯಲ್ಲಿ ಹೆಣ್ಣನ್ನು ಮದುವೆಯಾಗುದಿಲ್ಲ. ಗೊಲ್ಲರು ನನಗೆ ಒಕ್ಕಲಿಗರ ಮಗ ಎಂದು ಹೆಣ್ಣನ್ನು ಕೊಡುವುದಿಲ್ಲಬೇಡ ಹೋಗಿರಪ್ಪ ಎನ್ನುತ್ತಾರೆ. ಆಗ ಚಿಕ್ಕಾಲಪ್ಪ ನಾವು ಹೋಗುವುದಿಲ್ಲ. ನಿಮ್ಮ ಜೊತೆಗೆ ಇರುತ್ತವೆ ಎಂದು ಹಟ ಹಿಡಿಯುತ್ತಾರೆ. ಆಗ ಕೆಂಗರು ಮಲ್ಲೇಗೌಡ ಕಳುವರಳ್ಳಿ ಪಕ್ಕದ ಕಂಬೇರ ಕಟ್ಟೆಯಲ್ಲಿ ಏಳುಜನ ಗಂಡು ಮಕ್ಕಳಿಗೆ ಒಬ್ಬಳು ತಂಗಿ ಸಿನ್ನಮ್ಮ ಇದ್ದಾಳೆ ಹೆಣ್ಣು ಕೇಳಿಕೊಂಡು ಬಂದರೆ ನಾನು ಅವಳನ್ನು ಮದುವೆಯಾಗುತ್ತೇನೆ ಎಂದು ಹೇಳಿ ಕಳುಹಿಸುತ್ತಾನೆ.

ಆಲೇಗೌಡ ಕಂಬೇರುಗೊಲ್ಲರ ಹಟ್ಟಿಯಲ್ಲಿ ಹೆಣ್ಣನ್ನು ಕೇಳಿದಾಗ ಮೊದಲಿಗೆ ತಮಾಷೆಗೆ ಎಂದಿದ್ದರು. ನಿಜವಾಗಿಯು ಎಂದಾಗ ಬೈಯದು ಕಳುಹಿಸುತ್ತಾರೆ. ಆಗ ಗೌರಸಂದ್ರದ ಮಾರಕ್ಕ ಕನಸಿನಲ್ಲಿ ಬಂದು ಆ ಹುಡುಗ ಗೊಲ್ಲರವನ್ನು ಮದುವೆ ಮಾಡಿ ಎಂದಾಗ ಒಪ್ಪಿಕೊಳ್ಳುತ್ತಾರೆ. ಹೆಣ್ಣನ್ನು ಕೋಡುವುದಕ್ಕೆ ಹಲವಾರು ಷರತ್ತುಗಳನ್ನ ಹಾಕುತ್ತಾರೆ. ಪುರಲಳ್ಳಿ ಭೂತದ ಸಹಾಯದಿಂದ ಅದನ್ನು ನೆರವೇರಿಸುತ್ತಾರೆ. ಸೋಮವಾರದ ದಿನ ಕೆಂಗರು ಮಲ್ಲೇಗೌಡನ ಸಿನ್ನಮ್ಮನಿಗೂ ಮದುವೆಯಾಯಿತು. ಮದುವೆ ಮುಗಿದ ಮೇಲೆ ಆಲೇಗೌಡನಿಗೆ ನಿನಗೆ ಸೊಸೆ ಬೇಕಿತ್ತು, ಮಾಡಿಕೊಂಡೆ ನನಗೆ ನನ್ನ ದನಗಳ ಚಿಂತೆ ಅದುದರಿಂದ ನಾನು ದನಗಳ ಹತ್ತಿರ ಹೋಗುತ್ತೇನೆ. ಎಂದು ಹೊರಟು ಹೋದಳು.

## ಜುಂಜಪ್ಪನ ಹುಟ್ಟಿನ ಸಂದು

ಕಾಡುಗೊಲ್ಲರ ದೇವತೆ ಜುಂಜಪ್ಪನ ವಂಶವಳಿ ಹಿಂದಿನಂತೆ ಮುಂದುವರಿದುಕೊಂಡು ಬರುತ್ತದೆ. ಈ ಸಂದು ಕಾವ್ಯದಲ್ಲಿ ಬಹಳ ಮುಖ್ಯ ಪಾತ್ರವನ್ನು ವಹಿಸುತ್ತದೆ. ಜುಂಜಪ್ಪ

---

[42] ಚಲುವರಾಜು, ಬುಡಕುಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 118.

ಹುಟ್ಟುವುದಕ್ಕೆ ಮೊದಲು ತನ್ನ ಮಹಿಮೆಯನ್ನ ಹುಟ್ಟಿದ ಮೇಲೆ ತನ್ನ ಪ್ರಭಾವ ಬೀರಿರುವುದನ್ನು ಕಾಣುತ್ತೇವೆ.

ಕೆಂಗರು ಮಲ್ಲೇಗೌಡ ಮದುವೆಯಾದ ಮೇಲೆ ಹೆಂಡತಿಯನ್ನ ತಂದೆಯ ಮನೆಯಲ್ಲಿಯೇ ಬಿಟ್ಟು ದನಗಳೊಡನೆ ಪದುಮಣ್ಣನ ಹೊಲಕ್ಕೆ ಹೋಗುತ್ತಾನೆ. ಇತ್ತೆಕಡೆ ತಿರುಗಂಚಿ ಮುಗಿದ ಮೇಲೆ ಮೂರು ತಿಂಗಳು ಸಿನ್ನಮ್ಮವನ್ನು ತವರಲ್ಲಿ ಬಿಟ್ಟು ಆ ಮೇಲೆ ಕರೆತರುತ್ತಾರೆ. ಮದುವೆಯಾಗಿ ಹೆನ್ನರಡು ವರ್ಷವಾದರು ಗಂಡ ಮನೆಗೆ ಬರಲಿಲ್ಲ, ಮಕ್ಕಳಾಗಲಿಲ್ಲ, ಊರಿನ ಜನರೆಲ್ಲ. ಇವಳನ್ನ ಜರಿಯುವುದಕ್ಕೆ ಸುರು ಮಾಡಿದರು, ಇಲ್ಲಿ ಇವಳಿಗೆ ಗಂಡ ಬರದಿದ್ದುದ್ದ ಬಂಜೆ ಅನ್ನೋ ಶಬ್ಧವನ್ನು ಸಹಿಸದಿರುವುದನ್ನು ನೋಡಬಹುದು. ಹೆಣ್ಣಿನ ಗಂಡನಿಂದ ನಾನು ಮಕ್ಕಳನ್ನು ಹಡೆಯಬೇಕೆನ್ನುವ ಕಾತರ.

ಹನ್ನೆರಡು ವರ್ಷವಾದ ಮೇಲೆ ಸಿನ್ನಮ್ಮನನ್ನು ತವರಿಗೆ ಕರೆದು ಕೊಂಡು ಹೋಗುತ್ತಾರೆ. ಅಣ್ಣಂದಿರು ಚನ್ನಾಗಿ ನೋಡಿಕೊಂಡರು ಅಣ್ಣಂದಿರ ಹೆಂಡತಿಯರು ಇವಳನ್ನು ಜರಿಯುತ್ತಾರೆ. ಬಂಜೆಯ ಮುಖ ನೋಡಬಾರದು ಎನ್ನುತ್ತಾರೆ. ಇದನ್ನು ಕೇಳಿದ ಚಿನ್ನಮ್ಮನಿಗೆ ದುಃಖವಾಗುತ್ತದೆ. ಅಣ್ಣಂದಿರಿಗೆ ಸುಳ್ಳನ್ನ ಹೇಳಿ ಗಂಡನ ಮನೆಗೆ ಕಳುಹಿಸಿಕೊಡುವಂತೆ ಕೇಳಿಕೊಂಡು ಬರುತ್ತಾಳೆ. ಅತ್ತೆ ಮಾವ ಅವಳನ್ನು ಅಕ್ಕರೆಯಿಂದ ನೋಡಿಕೊಂಡರೂ ಮನೆಯನ್ನು ಬಿಟ್ಟ ಪ್ರಾಣ ಕಳೆದುಕೊಳ್ಳಕೆ ಕಾಡಿಗೆ ಹೋಗಿ ನೀರಿಗೆ ಬೀಳಲು ಹೋದಾಗ ಜಲ ಬತ್ತಿ ಹೋಗುತ್ತದೆ. ಆಗ ಗೌರಸಂದ್ರದ ಮಾರಮ್ಮ ಇವಳು ಸಹಾಯ ಮಾಡಲು ಬಂದು ಪರೀಕ್ಷಿಸಿ ನೀನು ಶಿವ–ಪಾರ್ವತಿಯನ್ನ ಕುರಿತು ತಪಸ್ಸುಮಾಡು ಎಂದು ಹೇಳುಕೊಡುತ್ತಾಳೆ.

ಶಿವ ಪಾರ್ವತಿಯರು ಭೂಲೋಕ ಸಂಚಾರ ಮಾಡಿ ಬರುವಾಗ ಸಿನ್ನಮ್ಮನ ಅವಳನ್ನು ನೋಡಿ ಅವಳಿಗೆ ಸಮಾದಾನಮಾಡಿ ನೀನು ಅದೃಷ್ಟವಂತೆ ನೀನು ಕೈಲಾಸಕ್ಕೆ ಬರುತ್ತಿಯ ಎಂದು ಏನೇನೋ ಹೇಳಿದರು ಸಿನ್ನಮ್ಮ ಕೇಳುವುದಿಲ್ಲ. ಮಕ್ಕಳು ಬೇಕು ಎಂದಾಗ ಶಿವ ಮೂರು ಗಂಡು ಮಕ್ಕಳನ್ನು ಕೊಡುತ್ತೇನೆ ಎನ್ನುತ್ತಾನೆ. ಆಗ ಸಿನ್ನಮ್ಮ ಹೆಣ್ಣು ಮಗಳು ಬೇಕು ಎಂದಾಗ ಮೂರು ಗಂಡು ಮಕ್ಕಳ ಹಿಂದೆ ಒಂದು ಮಗುವಾದರೆ ಕಷ್ಟ ಬರುತ್ತೆ ಹುಟ್ಟಿದ ಮೂರು ವರುಷಕ್ಕೆ, ತಂದೆಯ ಮರಣ ಎಂದರು. ಇಲ್ಲಿ ಹೆಣ್ಣು ಮಗು ಬೇಕೆ ಬೇಕು ಎನ್ನುವ ಅದಮ್ಯ ಬಯಕೆಯ ಹಠ ಒಡಿಯುವ ತಾಯಿಯನ್ನು ನೋಡಬಹುದು. ಅವಳಿಂದ ಎಂತಹ ಕಷ್ಟ ಬಂದರು ಸಹಿಸಿಕೊಳ್ಳತ್ತೇನೆಂದು ಸಿನ್ನಮ್ಮ ನಂತಹ ತಾಯಿಯರು ಇಂದಿಗೂ ಇರುವುದನ್ನು

ಕಾಣಬಹುದಾಗಿದೆ. ಬರದಿರುವ ಕಷ್ಟವನ್ನ ನೆನೆಸಿಕೊಂಡು ಹೆಣ್ಣು ಮಗು ಬೇಡ ಎನ್ನುವವರನ್ನು, ಬಂದೇ ಬರುತ್ತದೆ ಕಷ್ಟ ಎಂದರು ಹೆಣ್ಣು ಮಗು ಬೇಕು ಎಂಬ ಸಿನ್ನಮ್ಮ ನಂತವರು ಅಪರೂಪ.

"ಹತ್ತು ಜನ ಬರೇ ಗಂಡು ಮಕ್ಕಳು ಹುಟ್ಟಿದರೂ

ಬಂಜೆ ಎಂಬ ಸೊಲ್ಲು ಇಂಗಾಕಿಲ್ಲ.

ಹತ್ತು ಜನ ಬರೇ ಹೆಣ್ಣು ಮಕ್ಕಳು ಹುಟ್ಟಿದರೂ

ಬಂಜೆ ಎಂಬ ಸೊಲ್ಲು ಇಂಗಾದಿಲ್ಲ ಸ್ವಾಮಿ."[43]

ಬಂಜೆ ಎಂದ ಶಬ್ದ ಹೋಗಬೇಕಾದರೆ ಗಂಡು ಹೆಣ್ಣು ಎರಡು ಮಕ್ಕಳು ಬೇಕು ಎನ್ನುವುದು ಸಿನ್ನಮ್ಮನ ಧೋರಣೆ.

ಶಿವ ಸಿನ್ನಮ್ಮಳಿಗೆ ವರ ಕೊಡುತ್ತಾನೆ. ಮರೆಯಲ್ಲಿ ನಿಂತಿದ್ದ ಮಾರಮ್ಮ ಇವಳ ಪರವಾಗಿ ಮಾತನಾಡಿ ವೀರಭದ್ರತೆ ಮಗನಾಗಿ ಹುಟ್ಟಬೇಕು ಎಂದು ಕೇಳಿಕೊಳ್ಳತ್ತಾಳೆ. ಅವನ ರೌದ್ರರೂಪದ ಬಗ್ಗೆ ಹೇಳಿದರೂ ಕೇಳದೆ ಅವನ್ನೆಕೊಡಬೇಕು ಎನ್ನತ್ತಾಳೆ. ಆಯಿತು ಎನ್ನುತ್ತಾನೆ ಶಿವ ವೀರಭದ್ರನನ್ನು ಬಾವಿಯ ಒಳಗೆ ಹಾವು ಚೇಳು ಜೊತೆಯಲ್ಲಿ ಹಾಕಿರುತ್ತಾರೆ. ಪಾರ್ವತಿ ಕರೆದಾಗ ಮೇಲೆ ಬರುತ್ತಾನೆ. ಅವನಿಗೆ ಶಿವ ಪಾರ್ವತಿ ಸಿನ್ನಮ್ಮನ ಹೊಟ್ಟೆಯಲ್ಲಿ ಮಗನಾಗಿ ಹುಟ್ಟು ನೀನು ಗೋಹತ್ಯ ಶಿಶುಹತ್ಯ ಮಾಡಬಾರದು ಹಾಗೆ ಮಾಡಿದರೆ ನೀನು ಏಳು ನರಜನ್ಮವನ್ನು ಎತ್ತೇಬೇಕಾಗುತ್ತದೆ, ನೀನು ಹದಿನಾರು ವರ್ಷ ಮಾತ್ರ ಭೂಲೋಕದಲ್ಲಿ ಇರುತ್ತಿಯಾ, ಎಂದು ಹೇಳಿ ಅವನಿಗೆ ನೂರು ಹೆಸರು ಆಯುಧಗಳನ್ನ ಕೊಡುತ್ತಾರೆ. ವೀರಭದ್ರ ಶಿವನಿಗೆ ನಾನು ಪಾರ್ವತಿಯ ಹೊಟ್ಟೆಯಲ್ಲಿ ಹುಟ್ಟಿಲಿಲ್ಲ ನರಮನುಷ್ಯಯ ಹೊಟ್ಟಿಯಲ್ಲಿ ಹುಟ್ಟಿದರೆ ಸೂಕತವಾಗುತ್ತದೆ, ಬಾಯಲ್ಲಿ ಹುಟ್ಟಿದ್ದರೆ ಎಂಜಲಾಗುತ್ತದೆ. ಎಂದಾಗ ನೀನು ಸಿನ್ನಮ್ಮನ ಬಲ ಬುಜದ ಮೇಲೆ ಮಾಯದ ಪಲ್ಲಿಯಾಗಿ ಇದ್ದು ಹುಟ್ಟು ಎಂದು ಹೇಳುತ್ತಾನೆ. ಈ ಸನ್ನಿವೇಶ ನಮಗೆ ಕುಂತಿಯಲ್ಲಿ ಕರ್ಣಹುಟ್ಟಿದ ರೀತಿಯನ್ನು, ಕುಂತಿಯಲ್ಲಿ ಇದೆ ರೀತಿ ಸೂತಕವಾಗುತ್ತದೆ. ಎಂದು ಕಿವಿಯಲ್ಲಿ ಕರ್ಣ ಹುಟ್ಟಿದ್ದನ್ನು ನೆನಪಿಗೆ ತರುತ್ತದೆ.

ಜುಂಜಪ್ಪ ಸಿನ್ನಮ್ಮನಲ್ಲಿ ಬಲ ಬುಜದ ಮೇಲೆ ಮಾಯದ ಹಲ್ಲಿಯಾಗಿ ಇರುತ್ತಾನೆ.

"ಗರ್ಭಿಣೆಯಾದಳೊ ಸಿನ್ನಮ್ಮ

[43] ಚಲುವರಾಜು, ಬುಡಕಟ್ಟು ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 139

ಜುಂಜಪ್ಪನು ತಾಯಿ

ದಿವವೇನೋ ಕಳುದೀತು ಸ್ವಾಮಿ

ಕಾಲವೇ ವೀರಿತಯ್ಯೋ

ಗಳಿಗೇಗೆ ಮುಗುದಿ ತಮ್ಮ ಗಳಿಗಾಗೋ"[44]

ಹೀಗೆ ನವಮಾಸ ತುಂಬಿದಾಗ ಜುಂಜಪ್ಪ ತಾಯಿಗೆ ಹೇಳುತ್ತಾನೆ. ಊರಿನ ಮನೆಯೊಳಗೆ ನಾನು ಹುಟ್ಟೊದಿಲ್ಲ ಕಳುವರಳ್ಳಿಯ ಮೂಡಲ ದಿಕ್ಕಿಗೆ ಒಂದು ಗುಡಿಸಲು ಹಾಕಿಸಿಕೊಂಡು ಹೋಗು ಎಂದಾಗ ಹೊಟ್ಟೆಯ ಒಳಗಿಂದ ಹೀಗೆ ಮಾತನಾಡುವುದೊ ದೆವ್ವನೋ, ಭೂತನೋ ಎಂದು ಹೆದರುತ್ತಾಳೆ, ಆಲೇಗೌಡ ಸಮಾಧಾನ ಮಾಡಿ ಗುಡಿಸಲು ಹಾಕಿಸಿದನು. ಸೂಲಗಿತ್ತಿಯನ್ನು ಕರೆ ತರುತ್ತಾನೆ. ಸೂಲಗಿತ್ತಿ ಬಂದಾಗ ಜುಂಜಪ್ಪ ನನ್ನನ್ನು ಮುಟ್ಟಾತ್ತಾಳೆ ಎಂದು ತಾಯಿಗೆ ಅವಳು ಎಷ್ಟೋ ಜನನ ಮುಟ್ಟವಳೆ ನನ್ನ ಮೈಲಿಗೆ ಮಾಡುತ್ತಾಳೆ ಅವಳನ್ನು ಕಳುಹಿಸು ಎನ್ನುತ್ತಾರೆ.

"ಅಂದೆಗೆ ಹೇಳ್ಯಾವುನಣ್ಣ

ಸೋಮರುದ ದಿನುಲಣ್ಣ

ಸೂರ್ಯ ಪ್ರಕಾಶನಂದಾನಯ್ಯೋ ಗಲಿಗಾಗೋ"[45]

ಹೀಗೆ ಜುಂಜಪ್ಪ ಹುಟ್ಟುತ್ತಾನೆ. ಅವನು ಮೂರು ತಿಂಗಳ ತನಕ ನನ್ನನ್ನು ಮುಟ್ಟಬೇಡವೆನ್ನುತ್ತಾನೆ. ಮಾರಣ್ಣ ಮೈಲಾರಣ್ಣ ಹುಟ್ಟುವಾಗ ಸೂತಕವಾಗುತ್ತದೆಂದು ಬೇರೆ ಗುಡಿಸಲಿಗೆ ಇವನನ್ನು ವರ್ಗಾಹಿಸುತ್ತಾನೆ. ಮೂರು ತಿಂಗಳಾದ ಮೇಲೆ ಜುಂಜಪ್ಪ ಸೂತಕವನ್ನು ಕಳೆಯುವುದಕ್ಕೆ ಹೇಳುತ್ತಾನೆ. ಮ್ಯಾದರ ಚನ್ನ ತೊಟ್ಟಲನ್ನು ಎಣೆಯುವಾಗಲೂ ಜುಂಜಪ್ಪ ಸೂತಕವಾಗುತ್ತದೆಂದು ಮಹಿಮೆಯನ್ನ ತೋರುತ್ತಾನೆ. ಊರಿಗೆ ಹೋಗಿ ಆಲೇಗೌಡ ಪೂಜಾರಿಗೆ ಜನರಿಗೆ ನನ್ನ ಸೊಸೆಯ ಸೂತಕ ಕಳೆಯಿರಿ ಎಂದಾಗ ಗಂಡನಿಲ್ಲದೆ ಮಕ್ಕಳನ್ನು ಹೇಗೆ ಎತ್ತಳು ಎನ್ನುತ್ತಾರೆ. ನನ್ನ ಸೊಸೆ ಪರಿವ್ರತೆ ಎನ್ನುತ್ತಾನೆಗೌಡ ಕೆಂಗರು ಮಲ್ಲೇಗೌಡನ ಸಾಕು ತಾಯಿಯು ಪ್ರಶ್ನಿಸುತ್ತಾಳೆ. ಇವಳು ಸಿನ್ನಮ್ಮ ಹೆತ್ತ ಮಕ್ಕಳನ್ನು ನೋಡೊಕೆ ಹೋಗಿ ಜುಂಜಪ್ಪನನ್ನು ನೋಡಿದಾಗ ಅವಳ ಕಣ್ಣು ಹೋಗುತ್ತದೆ. ಅದರಿಂದ ಊರ ಜನ ಈ ಮಕ್ಕಳನ್ನು ನೋಡಿದರೆ

[44] ಚಲುವರಾಜು, ಬುಡಕುಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 149.
[45] ಚಲುವರಾಜು, ಬುಡಕುಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 154.

ಕಣ್ಣು ಹೋಗುತ್ತವೆ ಎಂದು ಯಾರು ನೋಡೊದಿಲ್ಲ. ಜುಂಜಪ್ಪನ ಮಹಿಮೆಯಿಂದ ಊರಿಗೆಲ್ಲ ಮಾರಿಯರು ನುಗ್ಗಿದರು ಇದರಿಂದ ಊರಿನ ಜನ ಸಾಯುವುದಕ್ಕೆ ಸುರು ಮಾಡಿದರು ಇದನ್ನು ನೋಡಿದ ಪೂಜಾರಿ, ದಳವಾಯಿ ಮುಂತಾದವರು ಗೌರಸಂದ್ರದ ಮಾರಮ್ಮನ ಕಣೆ ಕೇಳುವುದಕ್ಕೆ ಬಂದರು ಇವಳು ಬಾಲೆಯಾಗಿದ್ದಳು ಇವಳನು ಗುರುತಿಸಿ ಕಣೆ ಕೇಳಿದಾಗ ನೀವು ಜುಂಜಪ್ಪನ ತಾಯಿಯನ್ನು ಅನುಮಾನಿಸಿದ್ದಿರಿ ಅದರಿಂದ ಈ ರೀತಿಯಾಗಿದೆ ಹೋಗಿ ನಿಮ್ಮ ಮನೆ ದೇವರಿಗೆ ಹರಿಕೆ ಹೋತ್ತುಕೊಳ್ಳಿ ಎಂದು ಹೇಳಿದಳು. ಆಗ ಊರಿಗೆ ಬಂದು ಜುಂಜಪ್ಪನ ತಾಯಿಯ ಹತ್ತಿರ ಕ್ಷಮಾಪಣೆ ಕೇಳುತ್ತಾರೆ. ಅವಳಿಗೆ ಸೂತಕ ಕಳೆದು ಜನ್ನಿಣೆ ಹಾಲನ್ನ ಹಾಕುತ್ತಾರೆ.

ಮಕ್ಕಳನ್ನು ಎತ್ತಿಕೊಂಡು ಹೋದ ತಾಯಿಗೆ ಎಲ್ಲ ರೀತಿಯ ಶಾಸ್ತ್ರಗಳನ್ನು ಮಾಡುತ್ತಾರೆ. ಹಾಗ ಸಿತ್ತುರುದೇವರು ಪ್ರತ್ಯೇಕ್ಷವಾಗಿ ಮಕ್ಕಳಿಗೆ ಹೆಸರು ಕಟ್ಟುತ್ತಾರೆ. ಹೀಗೆ ದಿನ ಕಳೆದ ಮೇಲೆ ಒಂದು ದಿನ ಜುಂಜಪ್ಪ ತೊಟ್ಟಲಿಲ್ಲ ಕುಳಿತುಕೊಂಡು ತಾಯಿ ಸಿನ್ನಮ್ಮನನ್ನು ಹಿಯಾಳಿಸಿದುದಕ್ಕೆ ಜನರೆಲ್ಲಾ ಅವಳನ್ನ ಬೈಯ್ಯಾವ ಹಾಗೆ ಮಾಡುತ್ತೇನೆ. ಎಂದು ಸಿತ್ತಮಳೆಯಾಗಿ ಸುರಿಯಲ್ಲಿ ಎಂದು ಶಾಪಕೊಟ್ಟೆ ಹೀಗೆ ಅರಮನೆಯ ಮುಂದೆ ತೂಗು ಮಂಚದ ಮೇಲೆ ಕುಳಿತು ಸಂತೋಷದಿಂದ ಕಾಲ ಕಳೆಯುವಾಗ ಮೂರು ವರ್ಷವಾಗಿದೆ. ಮತ್ತೊಮ್ಮೆ ಗರ್ಭಿಣೆಯಾದಳು ನಿನ್ನಮ್ಮ ಒಂಭತ್ತು ತಿಂಗಳು ತುಂಬಿ ಹೆಣ್ಣು ಮಗುವಿಗೆ ಜನ್ಮ ನೀಡಿದಳು. ಇಲ್ಲಿ ಮೂರು ಹೆಣ್ಣಿನ ಹಿಂದೆ ಒಂದು ಹೆಣ್ಣಿ ಹುಟ್ಟಿದರೆ ಕಷ್ಟ ಬರುತ್ತದೆ. ಎಂಬುವುದನ್ನು ಹೊತ್ತಿ ಹೊತ್ತಿ ಹೇಳಿರುವುದನ್ನ ನೋಡಿದರೆ ಹೀಗೆ ಹುಟ್ಟಲೆಬಾರದ ಎನಿಸುತ್ತದೆ. ಮೂರು ಹೆಣ್ಣಿನ ಹಿಂದೆ ಗಂಡು ಹುಟ್ಟಬಹುದಂತೆ ಮೂರು ಗಂಡಿಗೆ ಹಿಂದೆ ಹೆಣ್ಣಿಕೆ ಹುಟ್ಟಬಾರದು ಎಂಬುದು ಸೋಜಿಗ ಹೆಣ್ಣೆಗ್ಯಾಕೆ ಈ ಅನ್ಯಾಯ. ಸೂತಕ ಎಲ್ಲಾ ಕಳೆದರು ಮಗುವಿಗೆ ಮೂರು ವರುಷವಾಗುತ್ತದೆ. ಪದ್ದಣ್ಣನ ಹೊಲದಲ್ಲಿದ್ದ ಕೆಂಗರು ಮಲ್ಲನಗೌಡನ ದನಗಳಿಗೆ ಸಪ್ಪೆರೋಗ ಬರುತ್ತದೆ. ಇವನು ಕಳುವಾರಳ್ಳಿ ಊರ ಮಾರಮ್ಮನಿಗೆ ಹರಕೆ ಹೋರುತ್ತಾನೆ. ರೋಗ ವಾಸಿಯಾಗುತ್ತದೆ. ಊರಿಗೆ ಹೊರಡುವಾಗ ಪದ್ಧಣ್ಣನಿಗೆ ಅನುಕೂಲ ಮಾಡಿಕೊಟ್ಟ ಊರಿಗೆ ಬರುತ್ತಾನೆ. ಊರಿಗೆ ಬಂದಾಗ ಜನವೆಲ್ಲಾ ನೀನು ಇಲ್ಲದಿರುವಾಗ ನಿನ್ನ ಹೆಂಡತಿ ಮಗುವನ್ನು ಹಡೆದವಳೆ ಎಂದು ಹೇಳುತ್ತಾರೆ. ಕೋಪ ಬಂದು ಮಲ್ಲೇಗೌಡ ಹೆಂಡತಿಯನ್ನು ಕತ್ತರಿಸುತ್ತಿನೆಂದು ಬರುವನು. ಆಗ ಮಕ್ಕಳು ತೂಗುಯ್ಯಾಲೆ ಮೇಲೆ

"ತಾಳೆಜೋಡಿ ಸೂರ್ಯಾ ಮೂಡಿದಂತೆ

ಕುಂತಿದ್ದನ್ನಣ್ಣ ಜುಂಜಪ್ಪ ಸ್ವಾಮಿ

ಮೋರ್ಚೆಬಿದ್ದನು ಕೆಂಗರು ಮಲ್ಲೇಗೌಡ

ಮಗನ ರೂಪನ್ನ ನೋಡಿಗಳಿಗಾಗೋ"[46]

ಆಗ ಜುಂಜಪ್ಪ ಹೋಗಿ ತಂದೆಯನ್ನು ಎತ್ತಿಕೊಂಡು ತಂದೆ–ತಾಯಿ ಇಬ್ಬರನ್ನು ಕೂರಿಸಿ ಪಾದ ಪೂಜೆ ಮಾಡುತ್ತಾರೆ. ಮಕ್ಕಳನ್ನು ನೋಡಿ ನನ್ನ ಹೆಂಡತಿ ಸತ್ಯವಂತಳು ಎಂದು ಕೊಳ್ಳುತ್ತಾನೆ.

ಕೆಂಗರು ಮಲ್ಲಿನ ಗೌಡ ಸಪ್ಪೆರೋಗ ವಾಸಿಯಾದರೆ ಮಾರಮ್ಮನಿಗೆ ಭಾನ ಹೋರ್ತಿನಿ ಅಂತ ಹರಕೆ ಮಾಡಿಕೊಂಡಿದ್ದನ್ನ ತಂದೆಗೆ ಹೇಳು ಏಳು ಊರಿನವರು ಒಂದು ಸೇರುವಂತೆ ಸಾರಿಸುತ್ತಾರೆ. ಒಲಗ ಸವೇತ ಭಾನ ಹೊರುವುದಕ್ಕೆ ಬಂದು ಹೊರುವಾಗ ಅವನಿಗೆ ಮರಣ ಬರುತ್ತದೆ. ಇಲ್ಲಿಯು ಆ ಹೆಣ್ಣನ್ನೆ ಕಾರಣ ಮಾಡಿರುವುದನ್ನು ನೋಡಬಹುದು. ಯಮದೂತರು ಹಗ್ಗ ಹಿಡಿದು ಬಂದಾಗ ಜುಂಜಪ್ಪ ನಮ್ಮ ತಂದೆ ಸತ್ಯವಂತರು ಊರಿನ ಮುಖವನ್ನ ಸರಿಯಾಗಿ ನೋಡದವರು ಅವರಿಗೆ ಹೂವಿನ ಪಲ್ಲಕ್ಕಿ ತರದೆ ಹಗ್ಗ ತಂದಿದ್ದಿರಾ ಎಂದು ಬೈಯ್ಯುತ್ತಾನೆ. ಅವದು ಹಿಂದಕ್ಕೆ ಹೋಗಿ ಜುಂಜಪ್ಪ ಹೇಳಿದ ಹಾಗೆ ಮಾಡುತ್ತಾರೆ.

ಇತ್ತ ಕಡೆ ಭಾನ ಹೊರುವಾಗ ಮರಣ ಬರುತ್ತದೆ. ಭಾನವನ್ನ ದೊಡ್ಡಾಲಪ್ಪನಿಗೆ ಹೊರಿಸುತ್ತಾರೆ. ಶವದ ಮುಂದೆ ಕುಂತು ಅಳುವ ತಾಯಿಗೆ ಹಿಂದಿನದ ನೆನೆಸಿ ನನಗೆ ಸೂತಕ ಬೇಗ ಮಣ್ಣು ಮಾಡಿ ಎಂದು ಜುಂಜಪ್ಪ ಹೇಳುತ್ತಾನೆ. ಆದರೆ ಜುಂಜಪ್ಪನ ಪುರಾಣದಲ್ಲಿ ಮಲ್ಲನಗೌಡ ಜನ್ಮಿಗೆ ಕುರಿಯನ್ನು ಹಿಡಿದು ಹೋಗುವಾಗ ಅವನು ಬಲಿಯಾದ ಎಂದು ಸಹ ಬಂದಿದೆ. ಏನೇಯಾದರು ಇಲ್ಲಿ ಮರಣ ಹೊಂದುತ್ತಾನೆ. ಹೀಗೆ ಅನೇಕಾರು ಪವಾಡಗಳ ಮೂಲಕ ಜುಂಜಪ್ಪ ಚಿಕ್ಕನಾದರೂ ದೊಡ್ಡವರ ಕೆಲಸವನ್ನು ಮಾಡುವುದರ ಮೂಲಕ ದೈವಾಂಶ ಸಂಭೂತನಾದರು ಸಾಮಾನ್ಯ ಜನರಂತೆ ಇರುವುದನ್ನು ಕಾಣಬಹುದು.

## ಸಿನ್ನಮ್ಮನ ಸತ್ಯ ಪರೀಕ್ಷೆ ಸಂದು

ದಿನ ಕಳದಂತೆ ಒಂದು ದಿನ ಹೊನ್ನಟ್ಟಾಲೇಗೌಡ ಸಿನ್ನಮ್ಮನಿಗೆ ನಾನು ಮದುಕನಾದೆ ನಿನ್ನ ಗಂಡ ಸತ್ತೋದ ನಾನಾ ಸತ್ತ ಮೇಲೆ ನನ್ನ ಮಕ್ಕಳು ಭಾಗ ಕೊಡುತಾರೋ, ಇಲ್ಲಾವೊ ನಾನು ನಿನಗೆ ಭಾಗಕೊಡುತ್ತೇನೆಂದು ಹೇಳಿ ಅವನ ಅರಮನೆ ಮುಂದೆ ಇನ್ನೊಂದು ಅರಮನೆ ಕಟ್ಟಿಸಿ

[46] ಚಲುವರಾಜು, ಬುಡಕುಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 182.

ವಜ್ರ ವೈಡೂರ್ಯವನ್ನ ಭಾಗ ಕೊಟ್ಟನು. ಇಲ್ಲಿ ಕೊಟ್ಟ ಮಾತಿಗೆ ತಪ್ಪಿದೆ ಸತ್ಯಾವೆ ನಮ್ಮ ತಾಯಿ ತಂದೆ ಎನ್ನುವ ರೀತಿಯಲ್ಲಿ ತನಗೆ ಮಕ್ಕಳಿದ್ರು ಸಾಕುಮಗನಿಗೆ, ತನ್ನ ಮಗನಂತೆಯೇ ಭಾಗ ಕೊಟ್ಟ ಹೃದಯ ವೈಶಾಲ್ಯತೆಯನ್ನ ಕಾಣಬಹುದು. ಜಾತಿ ವ್ಯವಸ್ಥೆಯಿಂದ ತತ್ತರಿಸುತ್ತಿರುವ ದೇಶದಲ್ಲಿ ಇಂತಹದೊಂದು ಉದಾಹರಣೆ ಶ್ಲಾಘನೀಯವಾಗಿದೆ. ಜುಂಜಪ್ಪ ಚಿಕ್ಕ ವಯಸ್ಸಿನಲ್ಲಿಯೇ ಮನೆಯ ಜವಬ್ಧಾರಿಯನ್ನು ವಹಿಸಿಕೊಳ್ಳಬೇಕಾಗಿತ್ತು. ಹೀಗೆ ಇರುವಾಗ ಸಿನ್ನಮ್ಮನ ಗಂಡ ಸತ್ತ ಮೂರು ವರ್ಷವಾಗಿತ್ತು ಆಗ ಇವರಿಗೆ ಬಡತನ ಬಂದಿತು. ಮನೆಯೊಳಗಿದ್ದು. ಭತ್ತ, ವಜ್ರ ವೈಡೂರ್ಯವೆಲ್ಲ ಮಣ್ಣಾಗಿ ಹೋಯಿತು. ಆಗ ಸಿನ್ನಮ್ಮ ಅಯ್ಯೋ। ದೇವರೆ ನಾನು ಅರಣ್ಯಕ್ಕೋಗಿ ದೇವರನ್ನಬೇಡಿ ಮಕ್ಕಳನ್ನ ಪಡೆದು ಬಂದೆ ಅಂತಹ ಮಕ್ಕಳನ್ನ ಕಳೆದುಕೊಳ್ಳ ಬೇಕಾಗುತ್ತದೆ. ಅವರಿಗೆ ಎಂಟು ದಿನದಿಂದ ಊಟವಿಲ್ಲ ಏನಾದರು ನನ್ನ ಮಕ್ಕಳನ್ನ ಉಳಿಸಿಕೊಳ್ಳಬೇಕು. ಎಂದು ಕೊಂಡು ತನ್ನ ವಾರಗಿತ್ತಿ ಸಿಕ್ಕಾಲಪ್ಪನ ಮನೆಗೊದಳು.

ಸಿಕ್ಕಾಲಪ್ಪನ ಹೆಂಡತಿ ಇವಳ ಸ್ಥಿತಿಯನ್ನ ನೋಡಿ ಕನಿಕರ ಪಡುತ್ತಾಳೆ. ಆಗ ಸಿನ್ನಮ್ಮ ನನಗೆ ಒಂದು ಸೇರು ಅಕ್ಕನುಚ್ಚು, ಒಂದು ಸೇರು ಬೇಳೆಯನ್ನು ಕೊಡು ಎಂದು ಹೇಳಿ ತೆಗೆದುಕೊಂಡು ಅಡಿಗೆ ಮಾಡಿದರೆ ಅದು ಕಲ್ಲು ಆಗಿಬಿಡುತ್ತದೆ. ಆಗ ಚಿನ್ನಮ್ಮ ಗೋಳಾಡುತ್ತಾಳೆ ನನ್ನ ಮಕ್ಕಳನ್ನ ನಾನು ಹೇಗೆ ಬದುಕಿಸಿಕೊಳ್ಳಲಿ ಎಂದು ಅರಮನೆಯೊಳಗೆ ಬಿದ್ದು ಅಳುತ್ತಾ ಮೂರು ಗಂಡಿನಿಂದೆ, ಒಂದು ಹೆಣ್ಣು ಹುಟ್ಟಿದ ದಸೆಯಿಂದ ಅರಪಾವಕ್ಕಿ ಮನೆಯೊಳಗಿಲ್ಲ ಜುಂಜಪ್ಪನ ಪಾದ ಹಿಡಿದುಕೊಂಡು ಅಳುತ್ತಾಳೆ.

ಹಾಗ ಜುಂಜಪ್ಪ, ಅಮ್ಮ ಮೂರೇ ತಿಂಗಳು ನಮಗೆ ಬಡತನವಿರುವುದು. ನಾವು ಅರಮನೆಯನ್ನು ಬಿಟ್ಟು ಕಾಡಿಗೆ ಹೋಗಿ ಮೂರು ತಿಂಗಳವರೆಗೆ ವಾಸ ಮಾಡಿ ಅಡವಿಯ ಸೊಪ್ಪನ್ನು ತಿನ್ನಬೇಕು ಕೈಸೆರೆಯಿಂದ ನಾವು ನೀರು ಕುಡಿಯಬೇಕಮ್ಮ ಇದು ಶಿವನಿಂದ ಬಂದಿರುವ ಶಾಪ ಎನ್ನುತ್ತಾನೆ. ಅದರಂತೆ ಅವರು ಅರಣ್ಯಕ್ಕೆ ಹೋಗುವಾಗ ಈ ಕಷ್ಟವೆಲ್ಲಾ ನನಗೆ ನನ್ನ ಅಣ್ಣಂದಿರ ಹೆಂಡತಿಯರಿಂದ ಬಂದಿದ್ದು ನನ್ನ ಅಣ್ಣಂದಿರು ಬಂದು ನೋಡಿದರೆ ಮೊದಲಿನಂಗೆ ಕಾಣಲಿ ಎಂದು ಶಾಪ ಕೊಡುತ್ತಾಳೆ. ಈ ಕಾವ್ಯದಲ್ಲಿ ಶಾಪ ಕೊಡುವುದು. ಜುಂಜಪ್ಪನಿಗೆ ಎಲ್ಲಾ ವಿಷಯ ಗೊತ್ತಿದ್ದು. ಆ ಕಷ್ಟ ಹೋಗಲಾಡಿಸಲು ಸಾಧ್ಯವಿಲ್ಲವಾದದ್ದು.

"ಮಕ್ಕಳನ್ನು ಕರೆಕೊಂಡು

ಕಾಡಿಗು ಹೋಗಳವುಳಣ್ಣ

ಆಗಲೆ ಭಗವಂತ

ಹಿರಿಯೂರ ಕಾಡಿಗೆ ಬಂದವ್ನೊ ಜುಂಜಪ್ಪ

ತಾಯಿ ಮಕ್ಕಳನ್ನ ಕರೆಕೊಂಡು"[47]

ಕಾಡಿಗೆ ಬರುತ್ತಾರೆ. ಎಲ್ಲರೂ ಆಗ ಜುಂಜಪ್ಪ ನಾವುಗಳು ಹುಟ್ಟಿದ ದೆಸೆಯಿಂದ ನಮ್ಮ ತಾಯಿಗೆ ಬಡತನ ಬಂದಿದೆ ಎಂದುಕೊಂಡು ಅಮ್ಮ, ನೀನು ತವರು ಮನೆಗೆ ಹೋಗು ಮೂರು ತಿಂಗಳು ತನಕ ಎನ್ನುತ್ತಾನೆ. ತಾಯಿ ಅದಕ್ಕೆ ಒಪ್ಪುವುದಿಲ್ಲ. ಕಾಡಿನಲ್ಲಿ ಮೂಗುತ್ತದೆ ಮುಂದೆ ರಾತ್ರಿ ಮಲಗಿದರು ಬೆಳಿಗ್ಗೆ ಸಿನ್ನಮ್ಮ ಕಾಡಿನ ಸೋಪ್ಪನ್ನು ತಂದು ಬೇಯಿಸಿ ಮಕ್ಕಳಿಗೆ ಕೊಡುತ್ತಾಳೆ ಜುಂಜಪ್ಪ ಮೂಗುತ್ತದ ಮರೆಯಲ್ಲಿ ಕುಳಿತು ಕಣ್ಣನ್ನು ಬಿಡುತ್ತಾನೆ. ಸೊಪ್ಪಲ್ಲ ವಿಷವಾಗುತ್ತದೆ. ಮಕ್ಕಳು ನನ್ನನ್ನು ಕೊಲ್ಲುತ್ತಿಯಮ್ಮ ಎನ್ನುತ್ತಾರೆ. ಆಗ ಆ ತಾಯಿಗಾದ ಸಂಕಟ ಅಷ್ಟಿಷ್ಟಲ್ಲ. ತಾಯಿ ಕರುಳು ಸಂಕಟ ಪಡುತ್ತದೆ. ಜುಂಜಪ್ಪ ಸಮಾದಾನ ಮಾಡುತ್ತಾ ಅವನು ಸೌದೆಯನ್ನ ಕಡಿದು ಮೂರು ಕಾಸಿಗೆ ಕ್ವಾಮಟಿಗನಿಗೆ ಮಾರಿ ಅಕ್ಕಿ, ಕಡಲೆ, ಎಲೆ ಅಡಿಕೆ ತೆಗೆದುಕೊಂಡು ಬಾ ಎನ್ನುತ್ತಾನೆ. ಅದೇ ರೀತಿ ಸೌದೆ ಕಡಿದು ಕ್ವಾಮಟಿಗನಿಗೆ ಮಾರಿ ಹಿರಿಯೂರು ಪೇಟೆಯಲ್ಲಿ ಮಗ ಹೇಳಿದ ಹಾಗೆ ಮಾಡಿ ತಂದು ಜುಂಜಪ್ಪನಿಗೆ ನೆಲಗಡಲೆ ಮಾಡಿಕ್ಕಿ, ಅನ್ನವನ್ನು ಮೂರು ಮಕ್ಕಳಿಗಿಕ್ಕಿ, ಅವಳು ಎಲೆ ಅಡಿಕೆ ರಸವನ್ನು ಕಡಿದು ಜೀವನ ನಡೆಸುತ್ತಾಳೆ.

ಪ್ರತಿ ನಿತ್ಯದಂತೆ ಆ ದಿನನು ಸೌದೆ ಕಡಿದು ತಲೆಯ ಮೇಲೆ ಕಿತ್ತುಕೊಳ್ಳುವಾಗ ಯಾವ ದೇಶದಿಂದಲೊ ಸುಂಟರಗಾಳಿ ಬಂದು ಅವಳ ಏಳು ಮಾರುದ್ದ ಮಂಡೆಕಿತ್ತೋ ಬರಿ ಬುಂಡೆ ಉಳಿಯುತ್ತದೆ. ಕಷ್ಟಪಟ್ಟು ತಲೆಯ ಮೇಲೆ ಹೊತ್ತುಕೊಂಡೋಗಿ ಪ್ರತಿನಿತ್ಯದಂತೆ ಮಾರಿ ಸಾಮಾನು ತಂದು ಅಡಿಗೆ ಮಾಡಿದಳು. ಮಾರನೇ ದಿನ ಅವಳು ಸೌದೆ ಕಡಿದು ಹಿಂದಿನವನ್ನು ನೆನೆಪಿಸಿಕೊಂಡು ಕುಳಿತಿರುವಾಗ ಮಗ ಹೇಳಿದ ಷರತ್ತು ನೆನಪಿಗೆ ಬರುತ್ತದೆ. ನೀನು ರಾತ್ರಿಯಾಗುವುದರೊಳಗೆ ಮನೆಗೆ ಬರಬೇಕು. ರಾತ್ರಿ ಕಳೆದು ಬಂದರೆ ನೀನು ತಾಯಿಯಲ್ಲ, ನಾನು ಮಗನಲ್ಲ ಎಂದಿರುತ್ತಾನೆ. ಅದರಿಂದ ಬೇಗನೆ ತಲೆಯ ಮೇಲೆ ಸೌದೆ ಹೊತ್ತುಕೊಳ್ಳುವಾಗ

"ಎದ್ದೇಳ್ತಿದ್ದಂತೆ ಉಟ್ಟಿದ್ದಂತೆ ಸೀರೆ

ನಿಲುವು ಬೆರ್‍ಯಸಾಗುದ್ರೋಗ್ ಬಿಡ್ತು

ಬಗ್ಗಿ ತಕ್ಕೊಂಬುದ ಕೊದ್ರೆ

---

[47] ಚಲುವರಾಜು, ಬುಡಕುಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 196

ಸೆದಿಲಿಡದಂತೆ ಗುಷ್ಟತ್ತದಂತೆ ಆಗಿ

ಪುಡಿ ಪುಡಿ ಯಾಗೊಗಿಬಿಡ್ತು

ಪರಮೇಶ್ವರನ ಶಾಪದಿಂದ"[48]

ಸೀರೆ ಇಲ್ಲದ ಮೇಲೆ ನನ್ನ ಮಾನ ಹೋಯಿತು. ನಾನು ಇದ್ದು ಪ್ರಯೋಜನವೇನು ಎಂದು ಕೊಂಡು ಸಾಯುವುದಕ್ಕೆ ಕೆಂಗೂರು ಕುಳಿಗೆ ಬೀಳುವುದಕ್ಕೆ ಹೋಗುತ್ತಾಳೆ. ಇವನ್ನರಿತ ಜುಂಜಪ್ಪ ತಾಯಿಗಾಗಿ ತ್ಯಾಗದ ಎಲೆಯನ್ನ ಸೃಷ್ಠಿ ಮಾಡುತ್ತಾನೆ. ಹೋಗುವ ದಾರಿಯಲ್ಲಿ ಇದನ್ನು ನೋಡಿದ ಸಿನ್ನಮ್ಮ ಇದು ಮಗನ ಮಹಿಮೆ ಎಂದು ತಿಳಿದು ಅದನ್ನು ತನ್ನ ಮೈಗೆ ಸುತ್ತಿಕೊಂಡು ಸೌದೆ ಮಾರಿ ಬಂದು ಮಕ್ಕಳಿಗೆ ಅಡಿಗೆ ಮಾಡಿಕೊಡುತ್ತಾಳೆ.

ಮಾರನೇ ದಿನ ಸೌದೆ ಮಾರುವುದಕ್ಕೆ ಹೋಗುವಾಗ ಅದೆ ದಾರಿಯಲ್ಲಿ ಅವಳ ಅಣ್ಣಂದಿರು ವಜ್ರ-ವೈಡೂರ್ಯ ಮಾರುವುದಕ್ಕೆ ಹಿರಿಯಾರು ಪೇಟಿಗೆ ಹೋಗುತ್ತಿರುತ್ತಾನೆ. ಇದನ್ನರಿತ ಸಿನ್ನಮ್ಮ ನನ್ನ ಅಣ್ಣಂದಿರ ಎದುರಿಗೆ ಹೀಗೆ ಹೋಗಬಾರದು ಎಂದು ಬೇಲಿಗೆ ಸೇರಿಕೊಳ್ಳೂತ್ತಾಳೆ. ಅಣ್ಣಂದಿರಿಗೆ ಶಾಪ ಕೊಡುವಾಗ ತಂಗಿಯ ದನಿ ಗುರುತಿಸಿದ ಅಣ್ಣಂದಿರು ಅವಳನ್ನ ಕರೆದುಕೊಂಡು ಹೋಗಿ ಬಿಳಿಸೀರೆ ಕೊಡಿಸಿ ಕಾಲುಂಗುರ ಕೊಡಿಸುತ್ತಾರೆ. ಮನೆಗೆ ಕರೆದುಕೊಂಡು ಹೋಗುವಾಗ ಮಗನ ಷರತ್ತನ್ನು ಹೇಳಿದರೂ, ನಾಳೆ ನಾವೆ ಕರೆದುಕೊಂಡು ಹೋಗಿ ಬಿಟ್ಟು ಬರುತ್ತವೆ ಎಂದು ಹೇಳಿ ಬಲವಂತದಿಂದ ಕರೆದೊಯ್ಯುತ್ತಾರೆ. ಬೆಳಿಗ್ಗೆ ಇವಳನ್ನ ಕರೆದು ಕೊಂಡು ಬರುವುದಿಲ್ಲ. ಸಿನ್ನಮ್ಮ ಮಕ್ಕಳಲ್ಲಿಗೆ ಒಬ್ಬಳೆ ಬರುತ್ತಾಳೆ.

ಸಿನ್ನಮ್ಮ ಮಗನಿಗೆ ಎಲ್ಲಾ ವಿಷಯವನ್ನು ಹೇಳಿದರು ಅವನು ಕೇಳುವುದಿಲ್ಲ. ನೀನು ಕ್ವಾಮಟಿಗನ ಮನೆಯಲಿದ್ದು ಬಂದಿದ್ದಿಯೇ ನೀನು ನಡತೆಗೆಟ್ಟವಳು ಎಂದು ಅವಳನ್ನ ಪರೀಕ್ಷೆಗೆ ಗುಡಿಪಡಿಸಿ ಆಲೇಗೌಡ ತಾತನಿಗೆ ಹೇಳಿ ಕಳುವಳ್ಳಿಯೊಳಗೆ ದೇವಾನು ದೇವತಗಳು ಸುತ್ತೇಳು ಹಳ್ಳಿಯವರನ್ನು ಕರೆಸಿ ನ್ಯಾಯಾ ಮಾಡುತ್ತಾನೆ.

"ಆಗ ಏಳೂರು ಗೌಡ

ಸಾನುಬೋಗರೆಲ್ಲಾ

ಕಲ್ತುಗಂಡು

---

[48] ಚಲುವರಾಜು, ಬುಡಕುಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 208

ಲೇಖಣಿ ಕಡ್ಡಿ ಮಸಿ ಕುಡಿಕೆ

ತಕ್ಕಂಡು ಶಂಕರನೇ

ಪ್ರಪಂಚಕ್ಕೂ ಸುದ್ದಿಸಾರಿದುರಯ್ಯ ಗಳಿಗಾಗೋ"[49]

ಮೊದಲಿಗೆ ನನ್ನ ತಾಯಿ ಒನಕೆಯನ್ನು ಅತ್ತೊಂದೇಟು ಇತ್ತೊಂದೇಟು ಹೊಡೆದು ಒಳನಾರನ್ನು ತೆಗೆಯಬೇಕು. ಎನ್ನುತ್ತಾರೆ. ಅದರಂತೆ ಸಿನ್ನಮ್ಮ ಮಾಡುತ್ತಾಳೆ. ಅದನ್ನ ಒಪ್ಪುವುದಿಲ್ಲ. ಜುಂಜಪ್ಪ ಇದು ಕ್ವಾಮಟಿಗನ ಕಪ್ಪಿನ ಮಹಿಮೆ ಎನ್ನುತ್ತಾರೆ. ಆ ಮೇಲೆ ಹೆಚ್ಚಿಗೆ ತೂತಿರೂ ಜರಡಿಯನ್ನು ತರೆಸಿ ಅದರಿಂದ ಕಲ್ಯಾಣಿಯಿಂದ ನೀರು ತರಲಿ ಎನ್ನುತ್ತಾರೆ. ಅದರಂತೆ ಶಿವನ ಸಹಾಯದಿಂದ ನೀರನ್ನ ತಂದು ಮಗನ ಪಾದಕ್ಕೆ ಸುರಿಯುತ್ತಾಳೆ. ಇದನ್ನು ಒಪ್ಪದೆ ಸಮುದ್ರಕ್ಕೆ ಮುತ್ತಿನ್ನುಂಗುರ ಎಸೆದು ರಾತ್ರಿ ಹನ್ನೆರಡು ಗಂಟೆಯೊಳಗೆ ತರಬೇಕು ಎನ್ನುತ್ತಾನೆ. ಅಲ್ಲಿಯು ಸಮುದ್ರರಾಜನಾದ ಬಪ್ಪರಾಯನ ಸಹಾಯದಿಂದ ಮಗನನ್ನು ನೆನೆದು ಉಂಗುರ ತಂದು ಮಗನಿಗೆ ಒಪ್ಪಿಸುತ್ತಾಳೆ. ಇದನ್ನು ಒಪ್ಪದೆ. ಇದು ಕ್ವಾಮಟಿಗದ ಕಪ್ಪಿನ ಮಹಿಮೆ ಎನ್ನುತ್ತಾನೆ. ಆಮೇಲೆ ಸಿಗೆ ಎಲೆಯಲ್ಲಿ ಇಸ್ತ್ರಿ ಎಲೆಯನ್ನು ಒಲಿಯಬೇಕು. ಎನ್ನುತ್ತಾನೆ ಹಾಗೆ ಮಾಡುತ್ತಾಳೆ. ಇದನ್ನು ಒಪ್ಪೊದಿಲ್ಲ.

ಜುಂಜಪ್ಪ ನಮ್ಮಮ್ಮ ಬಿಳಿಸೀರೆ ಹುಟ್ಟಿಕೊಂಡು ಆಗತಾನೆ ಮುಸುಕೊಡೆದ ಹೊಂಬಾಳೆಯನ್ನ ಹಿಡಿದುಕೊಂಡು ಅಗ್ನಿ ಪ್ರವೇಶ ಮಾಡಲಿ ಎನ್ನುತ್ತಾನೆ. ಸಿನ್ನಮ್ಮ ಹಾಗೆಯೇ ಮಾಡುತ್ತಾಳೆ ಅಗ್ನಿ ಪ್ರವೇಶವನ್ನು ಮಾಡಿ ಬಂದ ಮೇಲೆ ಬಿಳಿಸೀರೆ ಮಾಸೋದಿಲ್ಲ. ಹೊಂಬಾಳೆ ಬಾಡೊದಿಲ್ಲ. ಇದು ರಾಮಾಯಣದ ಸೀತೆಯನ್ನ ನೆನಪಿಗೆ ತರಿಸುವ ದೃಶ್ಯ. ಅಲ್ಲಿ ಗಂಡ ಹೆಂಡತಿಗೆ ಈ ಶಿಕ್ಷೆಕೊಟ್ಟರೆ. ಇಲ್ಲ ಮಗ ತಾಯಿಗೆ ಕೊಡುವ ಶಿಕ್ಷೆ. ಜುಂಜಪ್ಪ ಒಪ್ಪದೆ ಸತ್ತ ತಂದೆಯನ್ನು ಮೂರು ಮಾತಾನಡಿಸಿದರೆ ಒಪ್ಪುತ್ತೇನೆ ಎನ್ನುತ್ತಾನೆ. ಅದರಂತೆ ಮಾತನಾಡಿಸುತ್ತಾಳೆ. ಅವರ ತಂದೆ ಕೆಂಗರು ಮಲ್ಲೇಗೌಡ ನಿನ್ನ ತಾಯಿ ಪತಿವ್ರತೆಯೆಂದು ಹೇಳಿದರು ಒಪ್ಪುವುದಿಲ್ಲ ಈ ಸಮಯದಲ್ಲಿ ತಾಯಿಯ ಮುಖ ನೋಡಿದ ಜುಂಜಪ್ಪ ತಾಯಿಯ ಮುಖದ ಲಕ್ಷಣ ನೋಡಿ ನಮ್ಮನು ಅರ್ಥದೋಷ ಕಳೆದುಕೊಂಡಿದ್ದಾಳೆ ಎಂದು ಕೊಳ್ಳುತ್ತಾನೆ. ಇದಾದ ಮೇಲೆ ಅವರಜ್ಜಿನಿಗೆ ತಾತ ತ್ಯಾಗದ ಉಡುಗೆ ಬೇಲಿಯ ಮೇಲೆ ಹಾಕಿದ್ದಾಳೆ ಅದನ್ನು ತೆಗೆದುಕೊಂಡು ತೊಟಕೊಳ್ಳಲಿ ಎಂದಾಗ ಅದನ್ನ ಸಹ ಮಾಡುತ್ತಾಳೆ. ಅವು ಶಿವನ ಶಾಪದಿಂದ ಒಣಗಿರುವುದಿಲ್ಲ. ಇದು ಕ್ವಾಮಟಿಗನ ಮಹಿಮೆ ಎನ್ನುತ್ತಾರೆ.

---

[49] ಚಲುವರಾಜು, ಬುಡಕುಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 222.

ಕೊನೆಯದಾಗಿ ಒಂದು ಪರೀಕ್ಷೆಗೆ ತಾಯಿಯನ್ನು ಒಡ್ಡುತ್ತಾನೆ. ನಮ್ಮಗಳ ಮದ್ಯ ತಾಯಿಯ ಮದ್ಯ ತೆರೆ ಇರಲಿ ಹಾಗ ನಮ್ಮ ತಾಯಿ ಕರೆದ ಹಾಲು ತೆರೆಯಲ್ಲಿ ಸೂಜಿಯ ಹಾಗೆ ಬಂದು ನನ್ನ ಹೊಟ್ಟೆ ತುಂಬಿ, ತಮ್ಮಂದಿರ ಹೊಟ್ಟೆ ತುಂಬಿ, ತಂಗಿ ಹೊಟ್ಟೆ ತುಂಬಿದರೆ ಸಿನ್ನಮ್ಮ ಸತ್ಯವಂತೆ ಎನ್ನುತ್ತಾನೆ. ಸಿನ್ನಮ್ಮನಿಗೆ ಪಾರ್ವತಿ ಸಹಾಯದಿಂದ

"ಜುಂಜಪ್ಪನ ಹೊಟ್ಟೆ ತುಂಬಿತೋ

ಮಾರಣ್ಣನ ಹೊಟ್ಟೆ ತುಂಬಿತೋ

ಮೈಲಣ್ಣನ ಹೊಟ್ಟೆ ತುಂಬಿತೋ

ಸಿಕ್ಕೋಳು ಮಾರಕ್ಕ ಕುಡುದಳು ಸ್ವಾಮಿ."[50]

ಹೀಗೆ ಅವರ ಹೊಟ್ಟೆಗಳು ತುಂಬಿದ ಮೇಲೆ ಜುಂಜಪ್ಪ ಇನ್ನು ಪರೀಕ್ಷೆ ಮಾಡಿದರೆ ತಾಯಿ ಶಾಪಕೊಡುತ್ತಾಳೆ ಎಂದು ಮಕ್ಕಳು ಹೋಗಿ ತಾಯಿಯ ಪಾದವನ್ನು ಹಿಡಿದುಕೊಳ್ಳುತ್ತಾರೆ. ಅಮ್ಮ ಗಂಡನಿಲ್ಲದೆ ಗರ್ಭಿಣಿ ಹೇಗಾದಳು ಎಂದು ಜನ ಅನ್ನುತ್ತಿದ್ದರು, ಅದಕ್ಕೆ ನಿನ್ನ ಮಹಿಮೆ ಜನಕ್ಕೆ ಗೊತ್ತಾಗಲಿ ಎಂದು ರೀತಿ ಮಾಡಿದೆವು ಎಂದು ತಾಯಿಯನ್ನು ಕರೆದುಕೊಂಡು ಅರಮನೆಗೆ ಬರುತ್ತಾರೆ.

ಇಲ್ಲಿ ತಾಯಿಯನ್ನು ಪರೀಕ್ಷೆಗೆ ಗುರಿ ಪಡಿಸಿದ ಮಕ್ಕಳನ್ನು ನೋಡಿದರೆ ಇದು ಸರಿಯಲ್ಲಿ ಎನಿಸುತ್ತದೆ. ಜನ್ಮ ಕೊಟ್ಟ ತಾಯಿಗೆ ಇಷ್ಟ ಕಷ್ಟವನ್ನ ಬೇರೆಯವರಿಗೆ ಕೊಟ್ಟ ರೀತಿ ಕೊಡುವುದು ಸಮಂಜಸವಲ್ಲ ರೇಣುಕೆಗೆ ಮಗ ಕೊಟ್ಟ ಶಿಕ್ಷೆ ತಂದೆಯ ಮಾತನ್ನ ಮೀರಲಾರದೆ. ಆದರೆ ಇಲ್ಲಿ ಕಷ್ಟ ಪಟ್ಟ ತಾಯಿಗೆ ಈ ಶಿಕ್ಷೆ, ಹೆಣ್ಣು ಮಾತನಾಡದೆ ಈ ಶಿಕ್ಷೆಗೆ ಒಳಗಾದ ತಾಯಿಯ ಸಹನೆ ಆಕಾಶಕ್ಕಿಂತ ವಿಸ್ತಾರವಾದುದು. ಮಕ್ಕಳಿಗೆ ಮರು ಮಾತನಾಡದೆ ಮಕ್ಕಳು ಕೊಟ್ಟ ಪರೀಕ್ಷೇಗೆ ಒಳಗಾಗಿ ಮೂಕಳಾಗುತ್ತಾಳೆ. ಈ ರೀತಿ ತಾಯಿಗೆ ಮಾಡಬಾರದು ಎನ್ನುವುದು ನನ್ನ ಅನಿಸಿಕೆ. ಪ್ರಪಂಚದಲ್ಲಿ ಕೆಟ್ಟ ಅಪ್ಪ, ಅಕ್ಕ, ಅಣ್ಣ, ಎಲ್ಲರೂ ಇರುವುದು ಕೆಟ್ಟತಾಯಿ ಇಲ್ಲ ಆದರೂ ಅವಳ ಸತ್ಯವನ್ನು ಲೋಕಕ್ಕೆ ತೋರಿಸುವುದಕ್ಕೆ ಎಂದು ಕೊಂಡರು ಕಷ್ಟಪಟ್ಟ ಮಕ್ಕಳಿಗೊಸ್ಕರ ಕಾಡು ಪಾಲಾಗಿ ಪಡಬಾರದ ಕಷ್ಟ ಪಟ್ಟಂತ ತಾಯಿಗೆ ಈ ಶಿಕ್ಷೆ ಎಷ್ಟೆ ಸಮಂಜಸ. ತಾಯಿಯ ಕೈಯಲ್ಲಿ ಅಡಿಗೆ ಮಾಡಿಸಿ ದೇವತೆಗಳು ಮಾರಮ್ಮರು, ಪುರಳಿಳ್ಳಿ ಭೂತ ಎಲ್ಲರಿಗೂ ಊಟಕ್ಕೆ ಬಡಿಸುವುದರಿಂದ ಈ ಸಂದು ಮುಗಿಯುತ್ತದೆ.

---

[50] ಚಲುವರಾಜು, ಬುಡಕಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 238

## ಮಾರಕನ್ನ ಮದುವೆ ಸಂದು

ಸಿನ್ನಮ್ಮನ ಪರೀಕ್ಷೆ ಮುಗಿದ ಮೇಲೆ ದೇವತೆಗಳು, ಜನರು ಎಲ್ಲರಿಗೂ ಊಟವಾದ ಮೇಲೆ ಜುಂಜಪ್ಪನ ಸೋದರ ಮಾವ ದೊಡ್ಡ ಸಿನ್ನೇಗೌಡ ಎಲ್ಲರಿಗೂ ಶರಣು ಮಾಡಿ ಜುಂಜಪ್ಪನಿಗೆ ನಿನ್ನ ತಂಗಿ ಮಾರಕ್ಕನನ್ನು ನನ್ನ ತಮ್ಮ ಕಟ್ಟಾಣಿನಾಗನಿಗೆ, ಕೊಟ್ಟು ಮದುವೆ ಮಾಡು ಎಂದು ಕೇಳುತ್ತಾನೆ. ಇಲ್ಲಿಯಾ ಲೋಕ ರೂಢಿಯಂತೆ ಹಸು ತಂದ ಮನೆಗೆ ಕರು ಹೊಡೆ ಎನ್ನವಂತೆ ಅಪ್ಪನ ಮನೆಗೆ ಮಗಳನ್ನ ಕೊಡುವುದನ್ನು ನೋಡಬಹುದು. ಜುಂಜಪ್ಪ ಒಪ್ಪಿಗೆ ಸೂಚಿಸುತ್ತಾನೆ. ಮಾರಕ್ಕ ಋತುವಾತಿಯಾಗುತ್ತಾಳೆ. ಜುಂಜಪ್ಪ ಇವಳನ್ನ ಹದಿನಾರು ದಿನಗಳ ತನಕ ಕಾಡಿನಲ್ಲಿ ಗುಡಿಸಲು ಹಾಕಿ ಬಿಟ್ಟಿದು ಸೂತಕಕಳೆದ ಮೇಲೆ ಹಟ್ಟಿಗೆ ಬರಲಿ ಎಂದು ಹೇಳುತ್ತಾ ನಮ್ಮ ಕಾಡುಗೊಲ್ಲರಲ್ಲಿ ಋತುವತಿಯಾದ ಹೆಣ್ಣು ಮಕ್ಕಳು ಈ ರೀತಿ ನಿಯಮ ಅನುಸರಿಸಲಿ ಎಂದು ಹೇಳುತ್ತಾನೆ.

ಸೂತಕ ಕಳೆದ ಮೇಲೆ, ಶಾಸ್ತ್ರಕ್ಕೆ ಬಂದವರಿಗೆ ಹಬ್ಬದ ಅಡಿಗೆ ಮಾಡಿಸಿ ಊಟಕ್ಕೆ ಹಾಕಿಸುತ್ತಾನೆ. ಗಂಡಿಗೆ ಹಾಲೋತ್ತವ ಶಾಸ್ತ್ರ ಮಾಡಿ, ಜುಂಜಪ್ಪನು ಸಿತ್ರು ದೇವರ ಹತ್ತಿರ ಹೋಗಿ ತಂಗಿಗೆ ಹಾಲೋತ್ತುವ ಶಾಸ್ತ್ರ ಮುಗಿಸಿ ಮನೆ ಹತ್ತಿರ ಕರೆತಂದು ಕಟ್ಟುಣಿ ನಾಗನಿಗೂ ತಂಗಿ ಮಾರಕ್ಕನಿಗೂ ಮದುವೆ ಮಾಡುತ್ತಾನೆ. ಶಾಸ್ತ್ರ ಪ್ರಕಾರ ಮೂರು ತಿಂಗಳು ತಾಯಿಯ ಮನೆಯಲ್ಲಿದ್ದ ಮಾರಕ್ಕನನ್ನ ಅವರ ಮಾವ ಪಲ್ಲಕ್ಕಿಯಲ್ಲ ಕೂರಿಸಿಕೊಂಡು ಹೋಗುತ್ತಾನೆ.

ಈ ಮದುವೆಯಲ್ಲಿಯೆ ಹಾಲುತ್ತೋವ ಶಾಸ್ತ್ರ ಬಂದು, ಇದು ಇಂದಿಗೂ ಕಾಡುಗೊಲ್ಲರಲ್ಲಿ ಮುಖ್ಯವಾದ ಶಾಸ್ತ್ರವಾಗಿ ಮುಂದುವರಿದಿದೆ. ಅವರಿಗೆ ಪೂಜ್ಯವಾದ ಹಸುವಿನ ಹಾಲು ಇಲ್ಲ ಪ್ರಮುಖ ಪಾತ್ರವಹಿಸುತ್ತದೆ.

## ಏಳು ಹಸಿನ ಕರುಗಳ ಸಂದು

ಮದುವೆ ಮುಗಿದ ಮೇಲೆ ಜುಂಜಪ್ಪನ ತಾಯಿ ತಮ್ಮಂದಿರೆಲ್ಲರೂ ಕಂಬೇರಟ್ಟಿಗೆ ಹೋಗಿ ಮಾರಕ್ಕನನ್ನ ಬಿಟ್ಟು ಬರುವಾಗ ತಾಯಿ ಅಣ್ಣಂದಿರು ತಂಗಿಗೆ ಏಳುಜನ ಅಣ್ಣಂದಿರು ಏಳು ಕರುಗಳನ್ನ ಹೊಡೆದುಕೊಟ್ಟರು ಅವುಗಳಣ್ಣ ಹೊಡೆದುಕೊಂಡು ಕಳುವರಳ್ಳಿ ದಿಬ್ಬಕ್ಕೆ ಬಂದು, ಮೂಗುತ್ತದೆ ಹತ್ತಿರ ಕಾರೆಮುಳ್ಳು ಕವುಳಿಮುಳ್ಳಿ  ರಪ್ಪೆಯನ್ನು ಹಾಕಿ ಊರಿಂದ ಹೊರಗೆ ಊಳಿದುಕೊಂಡು ಮೇಯಸಿಕೊಂಡು ಇದ್ದರು. ಅವುಗಳ ಸಂಖ್ಯೆ ಹೆಚ್ಚಾಯಿತು ಅವನ್ನ ಬೆಳ್ಳಿಯ

ಚಿನ್ನದ ಪಿಳ್ಳಂಗೋವಿಯನ್ನ ಮಾಡಿಸಿಕೊಂಡು ದನಗಳ ಹೆಸರು ಹಿಡಿದು ಕೂಗಿದರೆ ಅವುಗಳ ಬರುತ್ತಿದ್ದವು. ಈ ಸನ್ನಿವೇಶ ಗೋವಿನ ಹಾಡಿನ ಧರಣಿ ಮಂಡಲ ಮಧ್ಯದೊಳಗೆ ಗಂಗೆಬಾರೆ ಗೌರಿ ಬಾರೆ ಎಂಬುವುದನ್ನ ನನಪಿಗೆ ತರಿಸುತ್ತದೆ. ದನಗಳ ಸಂಖ್ಯೆ ಹೆಚ್ಚಿ ಎಲ್ಲಾ ಕಡೆಯು ಮೇಯುವುದಕ್ಕೆ ಹೋಗುತ್ತವೆ. ಪುರುಸಕ್ಕನ ಕರೆಯ ನೀರನ್ನು ಕುಡಿದು ಬೆಳೆಯುತ್ತಿದ್ದವು ಏಳು ಲಕ್ಷ ದನಗಳಾದವು.

ಕಂಬೇರುಗೊಲ್ಲರಾದ ಜುಂಜಪ್ಪನ ಸೋದರ ಮಾವಂದಿರು ಇವನ ಏಳಿಗೆಯನ್ನು ನೋಡಿ ಸಹಿಸಲು ಆಗಲಿಲ್ಲ. ಅವನಿಗೆ ತೊಂದರೆಯನ್ನು ಕೊಡುವುದಕ್ಕೆ ಸುರು ಮಾಡಿದರು. ಹದಿನಾರು ವರ್ಷದ ತನಕ ತೊಂದರೆಯನ್ನ ಕೊಡುವುದಕ್ಕೆ ಇವರನ್ನು ಭೂಲೋಕಕ್ಕೆ ಶಿವನ ಶಾಪದಿಂದ ಬಂದಿರುತ್ತಾರೆ. ಜುಂಜಪ್ಪನ ದನಗಳು ನಮ್ಮ ದನಗಳಿಗೆ ಮೇವು ಸಿಗೊದಿಲ್ಲ ನೀರು ಸಿಗೊದಿಲ್ಲ ಎಂದು ಏನಾದರು ಮಾಡಿ ಇವನನ್ನು ಮಟ್ಟಹಾಕಬೇಕೆಂದು ಅವನಿಗೆ ಮಾಟ ಮಾಡಿವುದುಕ್ಕೆ ಮೊದಲಾದರು. ಮಾಟ ಮಾಡಿವುದಕ್ಕೆ ಮಂಗಳವಾಡದ ಚಿಕ್ಕಮಲ್ಲಣ್ಣ ದೊಡ್ಡಮಲ್ಲ. ಅನ್ನೊ ಮಾದಿಗರ ಪಂಡಿತರನ್ನು ಪುರುಷಕ್ಕನ ಕೆರೆಗೆ ಮಾಟ ಮಾಡುವುದಕ್ಕೆ ಕೇಳಿದಾಗ ಜುಂಜಪ್ಪನಿಗೆ ಎದುರಿಕೊಂಡು ಮಾಟ ಮಾಡೊದಿಲ್ಲವೆನ್ನುತ್ತಾನೆ. ಆದರೆ ಕಂಬೇರುಗೊಲ್ಲರು ಬಿಡದೆ.

"ಒಂಬತ್ತು ಸೇರಕ್ಕಿ ತಕ್ಕಂಡು

ಅಕ್ಕಿನೇವೊಳುಗೆ

ಜುಂಜಪ್ಪನ ರೂಪನ್ನ ಬರಿತಾರೋ"[51]

ಹೀಗೆ ಜುಂಜಪ್ಪನಿಗೆ ಮಾಟ ಮಾಡಿದರು ಹಾಗೆಯೇ ಅವನ ದನಗಳು ಪುರುಸಕ್ಕಿನಕೆರೆ ನೀರು ಕುಡಿದರೆ ರಕ್ತ ಕಾರಿ ಸಾಯುವ ರೀತಿಯಲ್ಲಿಯೂ ಮಾಟ ಮಾಡಿರು.

ಮಾಟದ ಮಹಿಮೆಯಿಂದ ಜುಂಜಪ್ಪನಿಗೆ ಮೈಕೈ ನೋವು ಬಂದಿತು. ಬೆಟ್ಟದ ಮೇಲೆ ಹೋಗಿ ತುಪ್ಪದಲ್ಲಿ ಮೈ ತೊಳೆದುಕೊಂಡು ನೋವ ನಿವಾರಿಸಿಕೊಂಡನು.

---

[51] ಚಲುವರಾಜು, ಬುಡಕುಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 266.

ಕಂಬೇರುಗೊಲ್ಲರು ದನಗಳ ಒಂದು ಹೊಟ್ಟಕರುವನ್ನ ಹಿಡಿದುಕೊಂಡು ಪುರುಷಕ್ಕನಕೆರೆಯ ಮದ್ಯ ಅದನ್ನು ನಿಲ್ಲಿಸಿ ಅದಕ್ಕೆ ಮಾಟ ಮಾಡಿದರು. ಜುಂಜಪ್ಪನಿಗೆ ನಿದ್ದೆ ಬಂದಿತು.

"ಆವಾಗ ಪಂಚ ಕಲ್ಯಾಣ ಅಂಬ
ಹಸುವನ್ನ ಕರುದು ಜುಂಜಪ್ಪ
ಕೇಳಮ್ಮ ಮಂಚ ಕಲ್ಯಾಣಿ
ನನಗ್ಯಾಕೋ ಸುಖನಿದ್ರೆ
ಕವಿದು ಬರುತ್ತೈತೆ ಈವಾಗ
ಈ ರಾತ್ರಿ ನಾನಿಲ್ಲಿ ಮನುಗುತೀನಿ."[52]

ಮಲಗಿದಾಗ ಪಂಚಕಲ್ಯಾಣಿ ಮಾರಣ್ಣ ಮೈಲಾರಣ್ಣನ ಕರೆದುಕೊಂಡು ಕೆರೆಗೆ ಹೋಗುವಾಗ ರಂಗಪ್ಪ ಅಲ್ಲಿಯ ಮಾಟದ ಬಗ್ಗೆ ಹೇಳುತ್ತಾನೆ. ಕುಡಿಯೊದಕ್ಕೆ ನೀರಿಲ್ಲದೆ ಗೊಳಾಡುವಾಗ ಈ ಗೋಳಾಟ ಶಿವ ಪಾರ್ವತಿಯರಿಗೆ ಮುಟ್ಟುತ್ತದೆ. ಆಗ ಅವರು ಬಂದು ಜುಂಜಪ್ಪನ ನಿದ್ರೆಯನ್ನು ಹೋಗಲಾಡಿಸುತ್ತಾರೆ. ಎದ್ದ ಜುಂಜಪ್ಪನಿಗೆ ಪಂಚಕಲ್ಯಾಣಿ ನೀನು ಕೆರೆಯ ನೀರನ್ನು ಕುಡಿದರೆ ವಿಷವೆಲ್ಲ ನಿನ್ನಲ್ಲಿ ಅಮೃತವಾಗುತ್ತದೆ. ಎಂದಳು ಹಾಗೆ ಜುಂಜಪ್ಪ ಕುಡಿದು ಮಾಟ ಹೋಗಲಾಡಿಸಿದಾಗ ಎಲ್ಲಾ ದನಗಳು ಹೋಗಿ ನೀರು ಕುಡಿದವು.

ಎಲ್ಲಾ ಮನುಷ್ಯರ ಸ್ವಭಾವದ ಪ್ರತಿಬಿಂಬ ಇರುವುದನ್ನು ಕಾಣುತ್ತೇವೆ. ಜುಂಜಪ್ಪನ ಏಳಿಗೆಯನ್ನು ಸಹಿಸದ ಅವರ ಸೋದರ ಮಾವಂದಿರು ಅವನಿಗೆ ಮಾಟ ಮಾಡಿಸಿ ದನಗಳನ್ನ ಸಾಯಿಸುವುದಕ್ಕೆ ನೋಡಿದರು. ಹಾಗೆಯೇ ಮಾಟವು ಸಹ ಇವರಲ್ಲಿ ಪ್ರಚಲಿತವಾಗಿರುವುದನ್ನು ಇಲ್ಲಿ ಕಾಣುತ್ತೇವೆ ಮಾಟಕ್ಕೆ ಕರಿಕೋಳಿ, ಹೊಟ್ಟೆಕರು ಮುಂತಾದ ಪ್ರಾಣಿಗಳನ್ನ ಬಳಸಿರುವುದನ್ನ ಕಾಣಬಹುದು.

**ಬಡ ಮೈಲನ ಸಂದು**

ಜುಂಜಪ್ಪ ಪುರಸಕ್ಕನ ಕೆರೆ ಏರಿಮ್ಯಾಲೆ ಸುರಹೊನ್ನೆಯ ಮರದಡಿ ಜುಂಜಪ್ಪ ಮಾರಣ್ಣ, ಮೈಲಣ್ಣ ಎಲ್ಲರು ಸಂತೋಷದಿಂದ ದನ ಮೇಯಿಸಿಕೊಂಡು ಇದ್ದರು. ಇದ್ದಕ್ಕಿದ್ದ ಅಂಗೆ

[52] ಚಲುವರಾಜು, ಬುಡಕಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 279.

ಪುರಸಕ್ಕನ ಕೆರೆಯಿಂದ ಬೆಂಕಿ ಮೇಲಕ್ಕೆ ಬಂದಿತು. ಇದನ್ನ ಹೋಗಿ ನೋಡಿದಾಗ ಹೊಟ್ಟೆ ಕರು ಮೈ ಮೇಲೆ ಸಗಣಿಗೆ ಬೆಂಕಿ ಹಾಕಿದ್ದರು. ಅದನ್ನ ನೋಡಿದ ಜುಂಜಪ್ಪ ಹೊದ್ದು ಕೆಡವಿದ. ಆಗ ಅದು ಕಂಬೇರುಗೊಲ್ಲರಟ್ಟಿ ಬಾಗಿಲಿಗೆ ಹೋಗಿ ಬಿತ್ತು. ಕರುವನ್ನ ಕಾಪಾಡಿ ನಮ್ಮ ಮಾವಂದಿರದು ಈ ಕರು ಎಂದುಕೊಂಡು ಅದನ್ನು ಮಾರಣ್ಣ ಮೈಲಣ್ಣ ತೆಗೆದುಕೊಂಡು ಬೇರೆಯವರ ವಡವೆ ನಮಗ್ಯಾಕೆ ಎಂದು ಹೋಗಿ ನಿಮ್ಮ ಕರವನ್ನ ತೆಗೆದುಕೊಳ್ಳ ಎಂದಾಗ, ಅದನ್ನ ತೆಗೆದುಕೊಂಡರೆ ನಮ್ಮವಂಶ ನಾಶವಾಗುತ್ತದೆ ಎಂದು ಅವರುಗಳಿಗೆ ಹುಣಸೆ ಚಬ್ಬೆಯಿಂದ ಚನ್ನಾಗಿ ಹೊಡೆಯುತ್ತಾರೆ. ಅವರು ಗೊಳಾಡಿದರು ಬಿಡದೆ ಚೆನ್ನಾಗಿ ಹೊಡೆಯುತ್ತಾರೆ. ಆ ಮೇಲೆ ಅವರು ಜುಂಜಪ್ಪನ ಹತ್ತಿರ ಬರುತ್ತಾರೆ. ನಮಗೆ ಹೊಡೆದುದ್ದು ಗೊತ್ತಾದರೆ ನಮ್ಮ ಸೋದರ ಮಾವಂದಿರನ್ನು ಹಾಳು ಮಾಡಿದರೆ ನಮ್ಮ ತಾಯಿಗೆ ತವರಿಲ್ಲದೆ ಹೋಗುತ್ತದೆ ಎಂದು ಹೇಳೊದಿಲ್ಲ.

ಬಂದ ತಮ್ಮಂದಿರನ್ನು ಜುಂಜಪ್ಪ ಪ್ರಶ್ನಿಸಿ ಅವರನ್ನು ಕೆರೆಯಲ್ಲಿ ಮುಳುಗಿಸಿ ಮೈಮೇಲಿನ ಬಾಸುಂಡೆ ಬರೆ ನೋಡುತ್ತಾನೆ. ಕೋಪ ಬಂದು ಹೋಗುವಾಗ ಮಾರಣ್ಣ ಮೈಲಣ್ಣ ತಡೆಯುತ್ತಾರೆ. ಜುಂಜಪ್ಪ ಏನು ಮಾಡುವುದಿಲ್ಲ ಎಂದು ಹೋಗಿ ಮಾವಂದಿರನ್ನು ಕೇಳಿದಾಗ ಹಿಂದಿನಂತೆಯೆ ಹೇಳುತ್ತಾರೆ. ಆಗ ಜುಂಜಪ್ಪ ಛಾಪ ಕಾಗದದಲ್ಲಿ ಬರೆಸಿಕೊಡಿ ಎಂದು ಬರೆಸಿಕೊಳ್ಳುತ್ತಾನೆ. ಜುಂಜಪ್ಪನ ಹಿಂದೆ ಹೊಟ್ಟಿಕರು ಬಂತು ಅದು ಬರುತ್ತಾ ಪುರಳ್ಳಿ ಭೂತಪ್ಪನ ಗುಡಿಯ ಮುಂದೆ ಬಂದು ನಿಂತುಕೊಂಡಾಗ ಭೂತಪ್ಪನ ದೃಷ್ಟಿ ಕರು ಮೇಲೆ ಬಿದ್ದು ಮಧುಗಿರಿ ಪರ್ವತ ಬೆಳೆದಂತೆ ಬೆಳೆಯಿತು. ಇದನ್ನು ಗಮನಿಸಿದ ಹಿಂದೆ ಬಂದ ಬಸವಬನನ್ನು ನಿನ್ನ ಮಾದಿಗರು ಮುಟ್ಟಿದ ದೆಸೆಯಿಂದ ನಿನ್ನ ಸೂತಕ ತೆಗೆದ ಮೇಲೆ ಒಳಗೆ ಬಿಡುತ್ತಿನಿ ಎಂದು ಸೂತಕ ತೆಗೆದು ಒಳಕ್ಕೆ ಸೇರಿಸಿಕೊಳ್ಳುತ್ತಾನೆ. ರಾತ್ರಿ ಜುಂಜಪ್ಪ ಮಲಗಿದ ಮೇಲೆ ಬಡಮೈಲ ಕಂಬೇರುಗೊಲ್ಲರ ಹಟ್ಟಿಗೆ ಹೋಗಿ ದನಗಳನ್ನ ಸಿಗಿದು ಹಾಕಿ ಬಂತು

"ಅಂಗವ್ರ ದನಗಳು ಕರುಳೆಲ್ಲ

ಒಕ್ಕಿ ಚೆಲ್ಲೆತೊ ಬಸವ ಶಿವನಿಗೋ"[53]

ಮುಂದೇಯು ಹೀಗೆ ಮಾಡಿತು. ಜುಂಜಪ್ಪನಿಗೆ ಗೊತ್ತಾದಾಗ ಮೈಲಣ್ಣ. ಮಾರಣ್ಣನಿಗೆ ಹೊಡೆದ ದೆಸೆಯಿಂದ ಹೀಗೆ ಮಾಡಿದೆ ಎನ್ನುತ್ತದೆ. ಅದಕ್ಕೆ ಬಡಮೈಲಾ ಎಂದು ಒಂಬತ್ತು ಜನ

---

[53] ಚಲುವರಾಜು, ಬುಡಕುಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 309.

ರಂಗಪ್ಪರು ಬಂದು ಹೆಸರಿಟ್ಟರು. ಪಂಚಕಲ್ಯಾಣಿ ಎಂಬ ಹಸುವಿಗೆ ಬಂದು ಕೆಟ್ಟ ಕನಸು ಬಿತ್ತು ಆ ಹಸು ಬಂದ ಜುಂಜಪ್ಪನಿಗೆ ಹಿರಿಯಣ್ಣ ಪ್ರಪಂಚಕ್ಕೆಲ್ಲಾ ಕ್ಷಾಮ ಬರುತ್ತಾದೆ  ಆಗ ದನಗಳೆಲ್ಲಾ ಸಾಯುತ್ತಾವಣ್ಣ ಎಂದು ಹೇಳಿದಾಗ ಜುಂಜಪ್ಪ, ದನಗಳು ಸತ್ತರೆ ನನಗೆ ಮುಕ್ತಿ ಇಲ್ಲ ಎಂದು ಆತ ಸತ್ತ ದನಗಳನ್ನು ಬದುಕಿಸಲು ತಪಸ್ಸು ಆಚರಿಸುತ್ತಾನೆ. ಮೈಲಾಣ್ಣನನ್ನ ದನ ಕಾಯುವುದಕ್ಕೆ ಬಿಟ್ಟು ಮಾರಣ್ಣನನ್ನು ತನ್ನ ಹತ್ತಿರ ಕರೆದುಕೊಂಡು ಹೋಗುತ್ತಾನೆ. ಮೈಲಣ್ಣ ದನಗಳಿಗೆ ಮೇವು ಇಲ್ಲದೆ ಹೋದಾಗ ಹುಡುಕಿಕೊಂಡು ಅರಣ್ಯಕ್ಕೆ ಹೋದಾಗ ಹುಲಿ ತಿನ್ನತ್ತೇನೆಂದು ಅಟ್ಟಿಸಿಕೊಂಡು ಹೋದಾಗ ಮಾರಣ್ಣನ, ನಮ್ಮಣ್ಣನ ದನಗಳು ಮೇವಿಲ್ಲ ಎಂದು ಹುಡುಕಿದ ಮೇಲೆ ಬರುತ್ತೇನೆ ಎಂದು ಹೇಳುತ್ತದೆ ಇದು ಪುಣ್ಯಕೋಟಿ ಗೋವನ್ನ ವ್ಯಾಘ್ರಹುಲಿಯನ್ನ ನೆನಪಿಗೆ ತರಿಸುತ್ತಿದೆ. ಆದರೂ ಬಿಡದೆ ಹುಲಿ ತಿನ್ನೊದಕ್ಕೆ ಬಂದಾಗ ಈ ವಿಷಯ ಜುಂಜಪ್ಪನಿಗೆ ಗೊತ್ತಾಗಿ  ಅಲ್ಲಿಂದಲೆ ಕೊಡಲಿಯಿಂದ ಹೊಡೆದಾಗ ಹುಲಿ ಎರಡು ತುಂಡಾಗಿ ಬೀಳುತ್ತದೆ. ಇದನ್ನ ನೋಡಿ ಮಾರಣ ನನ್ನಣ್ಣನಿಗೆ  ವಿರುದ್ಧವಾಗಿ ನೆಡೆದುಕೊಂಡ ನಾನು ಉಳಿಬಾರದು ಎಂದು ಕೊಂಡು ನೇಣು ಹಾಕಿಕೊಳ್ಳುವುದಕ್ಕೆ ಹೋದಾಗ ಗೌರಸಂದ್ರದ ಮಾರಮ್ಮನ ದಸೆಯಿಂದ ತಮ್ಮನನ್ನು ಬದುಕಿಸುತ್ತಾನೆ. ದನಗಳು ಮೇಯಲು ಮಾರಮ್ಮ ದಾರಿಯನ್ನ ತೋರಿಸಿದಾಗ ಹೋಗಿ ಅಲ್ಲ ದನಗಳನ್ನು ಮೇಯಿಸುತ್ತಾನೆ. ದನಗಳನ್ನ ದೊರೆಗಳ ಹೊಲದಲ್ಲಿ ಮೇಯಿಸಿದ ದೆಸೆಯಿಂದ ಜುಂಜಪ್ಪ ಅದನ್ನ ನಿವಾರಿಸುತ್ತಾನೆ. ಸೇಳೂರು ದೊರೆಗಳಿಗೆ ಜುಂಜಪ್ಪನ ದನಕಂಡು ಆಶ್ಚರ್ಯವಾಗುತ್ತದೆ ಆತನ ಬಸವ ಬೇಕು ಎಂದು ಕೊಂಡು ಅದಕ್ಕೆ ಬೆಲೆ ಕೇಳಿದಾಗ ಅದನ್ನ ಕೊಡೊದಿಲ್ಲ ಎಂದು ಹೇಳುತ್ತಾನೆ.

ಇತ್ತಾ ಕಂಬೇರುಗೊಲ್ಲರು ಮುತ್ತು – ರತ್ನದ ವ್ಯಾಪಾರಕ್ಕೆ ಹೋಗುವಾಗ ಸೇಳೂರ ದೊರೆಗಳನ್ನು ಮಾತನಾಡಿಸಿಕೊಂಡು ಹೋಗುವ ಎಂದು ಬಂದು ನೋಡಿದಾಗ ಜುಂಜಪ್ಪನ ದನಗಳನ್ನ ನೋಡಿ ಹೊಟ್ಟೆಕಿಚ್ಚು ಪಡುತ್ತಾರೆ. ಸೇಳೂರು ದೊರೆಗಳು ಬಸವನ ವಿಷಯ ಹೇಳಿದಾಗ ಅವನು ನನ್ನ ತಂಗಿಯ ಮಗ ಬಸವನಮ್ಮದು ಎಂದು ಸುಳ್ಳು ಹೇಳುತ್ತಾರೆ. ಸೇಳೂರು ದೊರೆಗಳಿಗೆ ಕ್ರಯ ಮಾಡುತ್ತಾರೆ. ಬಸವನ್ನು ಹಿಡಿದುಕೊಡಬೇಕು. ಹಾಗ ಜುಂಜಪ್ಪನ ಹತ್ತಿರ ಆಲೂರ ಮೆರವಣಿಗೆಗೆ ಎಂದು ಕರೆದುಕೊಂಡು ಹೋಗುವುದಕ್ಕೆ ಬಂದಾಗ ವಿಷಯ ತಿಳಿದ ಜುಂಜಪ್ಪ ಬಡಮೈಲಾಗೆ ಬುದ್ಧಿ ಹೇಳಿ ಕಳುಹಿಸುತ್ತಾನೆ. ಮೆರವಣಿಗೆಯಾಗಿ ಅರಮನೆಯೊಳಗಡೆ ಹೋಗುತ್ತಿದ್ದಾಗೆ ಅದನ್ನು ಕಟ್ಟಾಕಬೇಕು ಎಂದು ಕಂಬೇಕು ಗೊಲ್ಲರು ಹೇಳುತ್ತಾರೆ ಅದರೆ ಅವನ್ನ ಕಟ್ಟುವುದಕ್ಕೆ ಆಗುವುದಿಲ್ಲ ಹಾಗೆ ಏನಾದರೂ ಮಾಡಿ ಮದ್ದು

ಗುಂಡನ್ನು ಹಾಕಿ ಸುಟ್ಟಾಕಬೇಕೆಂದು ಸಂಚುಮಾಡಿದರು ಅದು ಜುಂಜಪ್ಪ ಇರುವ ತನಕ ಹಾಗೊದಿಲ್ಲ ಎಂದುಕೊಂಡು ಅವನ ಅಮ್ಮನ ಕೈಯಲ್ಲಿ ತಲೆಗೆ ಹೆಣ್ಣೆ ನೀರನ್ನು ಹಾಕಿಸಿಕೊಂಡಾಗ ಅವನಿಗೆ ಮಾಯದ ನಿದ್ದೆ ಬರುತ್ತದೆ.

ಕಂಬೇರು ಗೊಲ್ಲರು ಜುಂಜಪ್ಪನ ಮೂರ್ತಿಯನ್ನ ಮಾಡಿಕೊಂಡು ಬಸವನನ್ನು ಸೇಳೂರ ದೊರೆಗಳ ಹತ್ತಿರ ಕರೆದೊಯ್ದು ಗುರಿಕಾರರಿಂದ ಮದ್ದು – ಗುಂಡನ್ನ ಹೊಡೆಸುತ್ತಾರೆ. ಅದು ಶೋಕ ಮಾಡುತ್ತದೆ. ಇತ್ತ ಜುಂಜಪ್ಪನಿಗೆ ಸಿನ್ನಮ್ಮ ಮಿಂಚಿನ ಹೆಣ್ಣೆಯನ್ನು ಕಾಯಿಸಿ ಹಾಕುವಾಗ ಅವನಿಗೆ ಬಸವ ಪರಿಸ್ಥಿತಿ ಗೊತ್ತಾಗುತ್ತದೆ. ಜುಂಜಪ್ಪ ಅಲ್ಲಿದೆ ಹೋದಾಗ ಅಲ್ಲಿ ಹೆಣ್ಣು ಮಕ್ಕಳು ಬಸವನ ಸ್ಥಿತಿ ನೋಡಿ ಬೇಜಾರು ಮಾಡಿಕೊಳ್ಳುತ್ತಿರುವಾಗ ಜುಂಜಪ್ಪ ನೂರು ವರ್ಷದ ಮುದುಕನಾಗಿ ಹೋಗಿ ಎಲ್ಲಾ ದೇವತೆಗಳನ್ನ ಕರೆದು ನೀವು ಬಸವನ ಮೈನ ಗುಂಡನ್ನ ತೆಗೆಯಿರಿ ಎಂದು ಹೇಳುತ್ತಾನೆ. ಬಸವನಿಗೆ ನೀನು ಎದ್ದು ಬಾ ನಾನು ನಿನಗೆ ಜಾತ್ರೆ ಮಾಡಿಸುತ್ತೇನೆ ಈ ಸ್ಥಳದಲ್ಲಿ ಎನ್ನುತ್ತಾನೆ. ಬಡಮೈಲಾ ಎದ್ದು ಮೈಹೊದರಿದಾಗ ಗುಂಡು ಮದ್ದೆಲ್ಲ ಉದುರಿಹೋಗುತ್ತವೆ. ಇನ್ನ ಕಂಬೇರು ಗೊಲ್ಲರು ಬಸವನನ್ನ ತಮ್ಮದು ಮಾಡಿಕೊಳ್ಳಬೇಕೆಂದು ಆಸೆಯಿಂದ ಜುಂಜಪ್ಪನನ್ನ ಪಗಡೆಗೆ ಕರೆದು ನೀನು ಸೋತರೆ ಬಡಮೈಲಾ ಕೊಡಬೇಕಾಗುತ್ತದೆ ಎನ್ನುತ್ತಾನೆ ಅದರಂತೆ ನೀವೇನು ಕೊಡುತ್ತಿರ ಎಂದಾಗ ರಾಜ್ಯ ಬರೆದು ಕೋಡುತ್ತಿವಿ ಎನ್ನುತ್ತಾರೆ. ಆಗ ಪಗಡೆಯಾಟದಲ್ಲಿ ಸೀಳೂರು ದೊರೆಗಳು ಸೋಲುತ್ತಾರೆ ದೊರೆಗಳು ಊರು ಬರೆದುಕೊಡುತ್ತಾರೆ.

"ರಾಜ ಮುದ್ರಿಕೆ
ಉಂಗುರ ಸ್ವಾಮಿ
ಬೆರಳಿಗೆ ಧರಿಸೊರೋ
ಜುಂಜಪ್ಪ
ಏಳು ವರ್ಷ
ಸೇಳೊರೊಳಗೆ
ರಾಜ್ಯ ಆಳಿದನೋ ಸ್ವಾಮಿ ಶಿವನಿಗೋ"[54]

[54] ಚಲುವರಾಜು, ಬುಡಕುಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 400.

ಬಡಮೈಲ ಬದುಕಿ ಬಂದ ಸಂದು ಇದು ಪ್ರಾಣಿಯಾದ ಬಡ ಮೈಲಾ ಮಾತು ಆಡುತ್ತದೆ. ಪ್ರಾಣವಿರುವ ಮನುಷ್ಯನ ರೀತಿ ನಡೆಕೊಂಡು ನನ್ನ ಮನೆಯಲ್ಲಿ ಕಷ್ಟವಾಗಿದೆ ಎಂದು ತಿಳಿಯಲಿಲ್ಲ.

## ಸಾಣೇಕೆರೆ ಪುಟ್ಟಣ್ಣನ ಸಂದು

ಜುಂಜಪ್ಪ ಇದ್ದ ಕಡೆ ಬರ ಬಂದಿತು. ಆಗ ಅವನು ಯೋಚನೆ ಮಾಡುತ್ತಿರುವಾಗ ಪಂಚಕಲ್ಯಾಣ ಎಂಬ ಹಸು ಬಡಗಲು ದೇಶಕ್ಕೆ ಹೋದರೆ ಅಲ್ಲಿ ಹುಲ್ಲು ನೀರು ಸಿಗುತ್ತದೆ ಎನ್ನುತ್ತದೆ. ಹುಡುಕಿಕೊಂಡು ಜುಂಜಪ್ಪ ಎಷ್ಟೆ ದೂರ ಹೋದರು ಸಿಗೋದಿಲ್ಲ ದನಗಳನ್ನ ನೋಡೊಕಾಗೊದಿಲ್ಲ ನಾನೇ ಸಾಯಬೇಕು ಎಂದುಕೊಂಡು ಹೋಗುವಾಗ ಒಂದು ಜಿಂಕೆ ಆಕಡೆಯಿಂದ ಮೇದು ನೀರು ಕುಡಿದು ಬರುವುದನ್ನು ನೋಡಿ ಅದನ್ನ ಪ್ರಶ್ನಿಸುತ್ತಾನೆ. ಅದು ಹೇಳುತ್ತದೆ. ಸಾಣೇಕೆರೆ ಪಟ್ಟಣ್ಣ ಅಂದ್ರೆ ಘನ ಪಂಡಿತ ಆಚಾರಿ ಅವನು ಮಾಟ ಮಾಡಿ ಕಾಳಕದೇವಿಗೆ ನರಬಲಿ ಕೊಟ್ಟು ಹದಿನೈದು ದಿನಕ್ಕೊಂದು ಸಾರಿ ಮಳೆ ಸುರಿಸುತ್ತಾನೆ ಎಂದು ಹೇಳುತ್ತದೆ. ಅಲ್ಲಿ ಹೋಗಿ ನೋಡಿದಾಗ ಹುಲ್ಲು ನೀರು ಇರುತ್ತದೆ ದನಗಳನ್ನ ಬಿಡಲು ಯೋಚಿಸಿ ನಮ್ಮ ಸೋದರ ಮಾವರಿಗೆ ಇವನು ಪರಿಚಯವಿದೆ ಏನಾದರು ತೊಂದರೆಯನ್ನ ನನಗೆ ಮಾಡಿಸುತ್ತಾನೆ ಎಂದು ಕೊಳ್ಳುತ್ತಾನೆ. ಈ ಕಡೆಗೆ ಬಂದ ಕಂಬೇರುಗೊಲ್ಲರು ನಮ್ಮ ದನಗಳಿಗೆ ಕಾವಲುಕೊಡು ಎಂದು ಆಚಾರಿಯನ್ನ ಕೇಳಿದಾಗ ಒಪ್ಪಿಕೊಳ್ಳುತ್ತಾರೆ. ಅವರು ದನಗಳನ್ನ ಹೊಡದುಕೊಂಡು ಬರುವಾಗ ಜುಂಜಪ್ಪನ ದನಗಳನ್ನ ನೋಡುತ್ತಾರೆ. ಆಚಾರಿಗೆ ಚಾಡಿ ಹೇಳಿ ಜುಂಜಪ್ಪನ್ನು ಸಾಯಿಸು ಎನ್ನುತ್ತಾರೆ ನಾನು ಸಾಯುಸುವುದಿಲ್ಲ ಎಂದರು ಬಿಡದೆ ಅವನ ಮೇಲೆ ಚಾಡಿ ಹೇಳುತ್ತಾರೆ. ಆಗ ಜುಂಜಪ್ಪನಿಗೆ ಮಾಟ ಮಾಡುತ್ತಾನೆ. ಇದರ ಪರಿಣಾಮ ಕಣ್ಣು ಕಿವಿ ಏನು ಕೇಳದಾಗುತ್ತದೆ ಇದನ್ನರಿತ ಪರಮೇಶ್ವರ ದೇವೆಂದ್ರನ ಸಹಾಯದಿಂದ ಅವನಿಗೆ ಸಹಾಯ ಮಾಡುತ್ತಾರೆ ಆಗ ಜುಂಜಪ್ಪ ಸಾಣೇಕೆರೆ ಪುಟ್ಟಣ್ಣನಿಗೆ ತಿರುಗೇಟು ಕೊಟ್ಟು ಪುಟ್ಟಣ್ಣನನ್ನು ಸರ್ಪದಿಂದ ಕೊಲ್ಲಿಸುತ್ತಾನೆ.

ಆಚಾರಿಯ ಹೆಂಡಿತಿಯರು ಅಳುವಾಗ ಚಿಕ್ ರಾಣಿಗೆ ಏನುಬೇಕು ಕೇಳಿ ಕೊಳ್ಳಿ ಎಂದು ಹೇಳಿದಾಗ ಗಂಡ ಮಗನನ್ನು ಕೇಳುತ್ತಾಳೆ ಆಗ ಅವಳ ಗಂಡನಿಗೆ ಜನ್ಮ ಕೊಡೊದಿಲ್ಲ ನೀವು ಮಾಟದ ಪುಸ್ತಕನ್ನು ಒಂದು ಕಡೆ ಗುಡ್ಡೆಯಾಕಿದರೆ ನಿಮ್ಮ ಮಗನನ್ನ ಬದುಕಿಸುತ್ತೇವೆ ಎನ್ನುತ್ತಾರೆ. ಅದರಂತೆ ಮಾಡಿದಾಗ ಅವುಗಳನ್ನ ಜುಂಜಪ್ಪ ಸುಟ್ಟ ಹಾಕಿ ಅವರ ಮಗನಿಗೆ ಎಳನಾಗರ

ಮರಿಯ ಸಹಾಯದಿಂದ ಪುನರ್ ಜನ್ಮ ಕೊಡುತ್ತಾನೆ. ಆ ಕಾಲಕ್ಕೆ ಮಳೆ ಬೆಳೆ ಎಲ್ಲಾ ಚನ್ನಾಗಿ ಆಗುತ್ತದೆ. ಇವರ ಪ್ರದೇಶಕ್ಕೆ ಇವರು ಬರುತ್ತಾರೆ.

ಜುಂಜಪ್ಪನ ಕಾವ್ಯದಲ್ಲಿ ಪ್ರಾಣಿಗಳು ಮನುಷ್ಯರ ರೀತಿಯಲ್ಲಿ ವರ್ತಿಸುವುದನ್ನ ಮನುಷ್ಯರ ರೀತಿಯಲ್ಲಿ ಯೋಚಿಸುವುದನ್ನು ಕಾಣಬಹುದು. ಮಾಟ ಮಂತ್ರದ ಪರಿಣಾಮ ಪವಾಡ ಪುರುಷರಿಗೆ ಉಂಟಾಗುತ್ತದೆ ಸೂರ್ಯನಿಗೂ ಗ್ರಹಣ ಹಿಡಿದಂತೆ ಇವರಿಗೂ ಇಂತಹ ಪರಿಣಾಮ ಉಂಟಾಗುತ್ತದೆ.

## ತಾಳೆ ದುರುಗಿ ಸಂದು

ಜುಂಜಪ್ಪ ಅವನ ತಮ್ಮಂದಿರು ಸಂತೋಷದಿಂದ ದನಗಳನ್ನ ಕಾಯ್ದುಕೊಂಡು ಇದ್ದರು ಇತ್ತಕಡೆ ಕಂಬೇರು ಗೊಲ್ಲರು ಅರಮನೆ ಮುಂದೆ ಕುಳಿತಿರುವಾಗ ಇವರ ದನಗಳನ್ನ ಹೊಡದುಕೊಂಡು ಹೋಗುವುದನ್ನ ನೋಡಿ ಹೊಟ್ಟೆಕಿಚ್ಚು ಪಡುತ್ತಾರೆ. ಏನಾದರೂ ಮಾಡಿ ಇವನ ದನಗಳನ್ನು ಲಾಸು ಮಾಡಬೇಕು ಎಂದುಕೊಂಡು ತಾಳೆದುರ್ಗಿಯ ಮೊರೆ ಹೋದರೆ ನಮ್ಮ ಕೆಲಸ ಸಾಧಿಸಬಹುದು ಎಂದುಕೊಂಡು ಅವರು ಹೊನ್ನಿನ ರಾಶಿಯನ್ನ ತೆಗೆದುಕೊಂಡು ತಾಳೆದುರ್ಗಿಗುಡಿಗೆ ಹೋಗುತ್ತಾರೆ ಅವಳು ಆರು ತಿಂಗಳು ನಿದ್ರೆ ಮೂರು ತಿಂಗಳು ಎಚ್ಚರವಾಗಿರುತ್ತಾಳೆ. ಕಂಬೇರುಗೊಲ್ಲರು ಜುಂಜಪ್ಪನ ಹಟ್ಟಿ ಬಳಸಿಕೊಂಡು ಹೋಗುವಾಗ ತಮ್ಮಂದಿರನ್ನು ಮಾವರ ಯೋಗಕ್ಷೇಮ ವಿಚಾರಿಸುವುದಕ್ಕೆ ಕಳುಹಿಸಿದನು ಅವು ಸುಳ್ಳನ್ನು ಹೇಳಿ ಪೇಟೆಗೆ ಹೋಗುತ್ತೇವೆ ಎಂದರು ದೇವಸ್ಥಾನಕ್ಕೆ ಬಂದು ಕಂಬೇರು ಗೊಲ್ಲರು ದೇವಸ್ಥಾನದ ಮುಂದೆ ಹೊನ್ನಿನರಾಶಿ ಸುರಿದ ದುರ್ಗಿ ಎಚ್ಚರವಾಗುವ ದಿನ ಅವಳ ಉಸಿರಲೆ ಆರು ಸಾವಿರ ಜನ ಎಳೆದು ಕೊಳ್ಳುತ್ತಾಳೆ. ಅದರಿಂದ ನಾವು ಬಾಗಿಲಮರೆಗೆ ನಿಂತುಕೊಳ್ಳುವ ಎಂದು ನಿಂತುಕೊಂಡರು. ದುರ್ಗಿಗೆ ಎಚ್ಚರವಾಯಿತು. ಬಾಗಿಲ ಕಡೆ ಹೊನ್ನಿನರಾಶಿ ನೋಡಿ ನನ್ನ ಭಕ್ತರಿಗೆ ಕಷ್ಟ ಬಂದಿದೆ ಅಂದುಕೊಂಡು ಅವರನ್ನು ಮಾತನಾಡಿಸಿದಳು. ಆಗ ಅವರು ನಮ್ಮ ಸೋದರ ಅಳಿಯ ಜುಂಜಪ್ಪ ನಮ್ಮ ದನಗಳಿಗೆ ಮೇವಿಲ್ಲದ ಹಾಗೆ ಮಾಡುತ್ತಾನೆ ಅದುದರಿಂದ ಅವನನ್ನು ನುಂಗು ಎಂದರು ದುರ್ಗಿ ಆಗಲಿ ಎಂದು ಹೇಳಿದಳು. ಆದರು ಕಂಬೇರು ಗೊಲ್ಲರು ನೀನು ಭಾಷೆಯನ್ನ ಕೊಡಮ್ಮ ಎಂದು ಕೇಳಿ, ಭಾಷೆಯನ್ನ ತೆಗೆದುಕೊಂಡರು ಜುಂಜಪ್ಪನನ್ನ ನೀನು ನುಂಗಿದರೆ ವರುಷಕೊಂದು ಸಾರಿ ಕುರಿ ಕೋಣ ಕಡಿದು ಪರುಷೆ ಮಾಡುತ್ತಿವೆಂದರು.

ತಾಳೆ ದುರುಗಿ ಬಿಳಿ ಕಾಗೆಯನ್ನು ಕರೆದು ಒಂದು ಪತ್ರ ಬರೆದುಕೊಟ್ಟು ಅದರಲ್ಲಿ

"ಎಲ್ಲವೋ ಕಾಡುಗೊಲ್ಲ

ನೀನು ತಂದೆ ಇದ್ದಂತೆ ಹುಟ್ಟಿದ್ರೆ

ಬಂದು ನನ್ನ ಕಾವುಲು ಮೇಯಿಸಬಹುದು.

ತಂದೆ ಸತ್ತು ಹನ್ನೆರಡು ವರುಷಕ್ಕೆ ಹುಟ್ಟಿದ್ರೆ

ಉಡುದಾರವಿಲ್ಲದ ಮುರುದಾರು ಮುಂಡೆಗೆ ಹೆದರಿ

ಪಡುವುಲು ದೇಶದಲ್ಲಿ ಇರಬಹುದು ಕಣೋ ಜುಂಜಪ್ಪ" [55]

ಇದರಂತೆ ಜುಂಜಪ್ಪ ಬರುವಾಗ ಎಡಗಣ್ಣು ಹದುರುತ್ತಿದೆ ನಾನು ದುರ್ಗಿಯನ್ನ ಕೊಲ್ಲುವ ಸಂದರ್ಭಬಂದರೆ ಏನು ಮಾಡೊದು ಎಂದುಕೊಂಡು ಶಿವ – ಪಾರ್ವತಿಯರಿಗೆ ಕಾಗದ ಬರೆದು ಬಾಣ ಬಿಟ್ಟ ಅದು ಪರಮೇಶ್ವರನ ಅರಮನೆ ಬಾಗಿಲು ಕಂಬಕ್ಕೆ ಹೊಡೆಯುತ್ತದೆ. ಇದು ಅರ್ಜುನ ದೇವೆಂದ್ರನ ಅರಮನೆಗೆ ಕಾಮದೇನು ಕಲ್ಪವೃಕ್ಷಕ್ಕೆ ಕಾಗದ ಬರೆದ ಹಾಗೆ ಇವನು ಬರೆಯುತ್ತಾನೆ. ದೇವಗನ್ನಿಕೆಯರನ್ನು ದೇವತೆಗಳಿಗೆ ಅಡಿಗೆ ಮಾಡುವುದಕ್ಕೆ ಕಳುಹಿಸಿಕೊಡಿ ಎಂದು ಬರೆದಿದ್ದ. ಅದರಂತೆ ಶಿವ ದೇವಗನ್ನಿಕೆಯರನ್ನ ಕಳುಹಿಸಿದ್ದ ಅವರು ಭತ್ತವನ್ನು ಒಳ್ಳಲ್ಲ ಕುಟ್ಟದ ಹಾಗೆ ಒಲೆಯಲ್ಲಿ ಬೇಯಿಸದ ಹಾಗೆ 'ಭಟ್ಟಾಮೃತ' ಅಡಿಗೆ ಮಾಡಿ ದೇವತೆಗಳನ್ನ ಕರೆದು ಜುಂಜಪ್ಪ ಕಾವಲಮ್ಮನ ಕೈಲಿ ಊಟಕ್ಕೆ ಹಾಕಿಸುತ್ತಾನೆ. ಪುರಳಿಳ್ಳಿ ಭೂತಪ್ಪನನ್ನ ಕರೆಯುವುದಿಲ್ಲ ಊಟವೆಲ್ಲ ಮುಗಿದರು ಒಂದು ಮೂಲೆ ಕರಗಿಸಿವುದಿಲ್ಲ. ಎಲ್ಲರದು ಮುಗಿದ ಮೇಲೆ ದಾಸಪ್ಪನ ವೇಷದಲ್ಲಿ ಭೂತಪ್ಪ ಬಂದು ಊಟ ಕೇಳುತ್ತಾನೆ. ಕಾವಲನ್ನು ಸೊಂಟ ನೋವು ಅಂತ ಕುಳಿತುಕೊಂಡು ಊಟಕ್ಕೆ ಹಾಕಿದಾಗ ಕಾವಲಮ್ಮನ ಕೈಲಿ ಊಟ ಮಾಡುವ ತನಕ ಭೂತಪ್ಪ ಬಿಡುವುದಿಲ್ಲ.

ಜುಂಜಪ್ಪ ಹೋಗಿ ಮಲಗಿದ ಅವನ ಮೇಲೆ ಭೂತಪ್ಪನ ಶಾಪದಿಂದ ಹುತ್ತ ಬೆಳೆಯಿತು. ಮಾರಣ್ಣ, ಮೈಲಣ್ಣ ದನಗಳನ್ನ ಅಟ್ಟಿಕೊಂಡು ಹುಲ್ಲುಗಾವಲಿಗೆ ಹೋದಾಗ ಕಂಬೇರು ಗೊಲ್ಲರು ಅವರುಗಳನ್ನ ಹಿಡಿದುಕೊಂಡು ಹೋಗಿ ಅರಗಿನ ಮನೆಯಲ್ಲಿ ಮೆಣಸಿನಕಾಯಿ ಹೊಗೆಯನ್ನು ಹಾಕಿ ಸಾಯಿಸಲು ಕೂಡಿ ಹಾಕಿದರು. ಅವರ ಅಳು ಬಸಪ್ಪನಿಗೆ ಕೇಳಿಸಿ ಕಾವಲಮ್ಮ ಸಹಾಯದಿಂದ ಅವರನ್ನು ಬಿಡಿಸಿದ.

[55] ಚಲುವರಾಜು, ಬುಡಕುಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 487.

ಕಂಬೇರುಗೊಲ್ಲರು ಬಡಮೈಲಾ ಇರೋ ತನಕ ಜುಂಜಪ್ಪನಿಗೆ ಏನು ಮಾಡೊಕೆ ಆಗೋದಿಲ್ಲ ಎಂದು ಮದ್ದು – ಗುಂಡುಗಳಿಂದ ಬಸವನ್ನು ಹೊಡಿಸಿದರು. ಪಂಚಕಲ್ಯಾಣಿ ಸಹಾಯದಿಂದ ಜುಂಜಪ್ಪನಿಗೆ ಹುತ್ತ ಬೆಳೆದಿರುವುದನ್ನು ತನ್ನ ಜೊಲ್ಲಿನ ಸಹಾಯದಿಂದ ಹೊಡೆದನು. ಜುಂಜಪ್ಪ ಎದ್ದು ಬಸವನನ್ನು ನೋಡಿ ನೀನು ಮೈ ಒದರು ಎಂದ ಮದ್ದು ಗುಂಡುಗಳೆಲ್ಲ ಉದುರಿಹೋದೊ ಜುಂಜಪ್ಪ ಮೈ ಸವರಿದಾಗ ಮೈಮೊದಲಿನ ರೀತಿ ಆಯಿತು. ಜುಂಜಪ್ಪ ತಾಳೆದುರುಗಿಯನ್ನ ಮಟ್ಟ ಹಾಕುವುದಕ್ಕೆ ಉರಿಗಣ್ಣು ಬಿಟ್ಟಾಗ ಈಶ್ವರನೆ ಅವನಿಗೆ ಸಾತ್ವಾನ ಹೇಳುತ್ತಾನೆ. ಅವನ ಕೋಪ ಕಡಿಮೆಯಾದ ಮೇಲೆ ಅವನನ್ನು ದುರ್ಗಿ ಅಟ್ಟಿಸಿಕೊಂಡು ಹೋದಳು ಅವನು ಓಡಿ ಆಲದ ಮರ ಹತ್ತಿಕೂತ. ದುರುಗಿ ನಿನ್ನ ಆಲದ ಮರನ ನುಂಗುತ್ತಿನಿ ಅಂತ ಹತ್ತಿರಕ್ಕೆ ಹೋದಳು. ಇದನ್ನೆಲ್ಲಾ ಇಲ್ಲಿ ಜುಂಜಪ್ಪ ಎಲ್ಲಾ ದೇವರಿಗಳನ್ನ ನೆನೆಪಿಸಿಕೊಂಡು ಪುರಲಳ್ಳಿ. ಭೂತಪ್ಪ ದಾಸಯ್ಯನ ವೇಷಲ್ಲಿ ಬಂದು ತಾಳೇ ದುರುಗಿಯನ್ನ ಮಣಿವಿಗೆ ಆಹ್ವಾನಿಸಿ ಅವಳ ಜೊತೆ ಯುದ್ಧ ಮಾಡಿ ಬಲಮುರಿ ದೊಣ್ಣೆ ಎತ್ತಿ ಜಗ್ಗಿಸಿ ಹೊಡೆದನು. ಆಗ ದುರ್ಗಿ ಮೂರು ತುಂಡು ಮಾಡಿ ಕೊಂಡ ಆಗ ಭೂತಪ್ಪನಿಗೆ ಜುಂಜಪ್ಪ ಆರ್ಶಿವಾದ ಮಾಡಿದ ನಿನ್ನ ಪೂಜೆ ವೈಭವಯುತವಾಗಿ ಭೂಲೋಕದಲ್ಲಿ ನಡೆಯಲಿ ಎಂದ

## ದೊಡ್ಡಕ್ಕಜ್ಜಿ ಸಂದು

ಜುಂಜಪ್ಪನ ನಾಮ ಸ್ಮರಣೆಯಿಂದ ಸುರುವಾಗುತ್ತದೆ. ಮಾರಣ್ಣ ಮೈಲಣ್ಣ ದೀಪಾವಳಿಯನ್ನ ಮಾಡಬೇಕು, ಎಂದು ಅವರೇಕಾಯಿಗೋಸ್ಕರ ಹೊನ್ನಟ್ಟಲೇಗೌಡನ ಹೆಂಡತಿ ದೊಡ್ಡಕ್ಕ ಅವರೆ ಹೊಲವನ್ನ ಕಾಯುತ್ತಿರುತ್ತಾಳೆ ಅಲ್ಲಗೋಗಿ ನಮ್ಮಜ್ಜಿಕೊಟ್ಟೆ ಕೊಡುತ್ತಾಳೆ ಎಂದು ಕೊಂಡು ಹೋಗಿ ಕೇಳಿದಾಗ ಇನ್ನ ನಾನು ದಾಸಯ್ಯಾನಿಗೆ, ಜಂಗಮರಿಗೆ ಕೊಟ್ಟಿಲ್ಲ ನಿಮಗ್ಯಾಗೆ ಕೊಡಲಿ, ಕಾಡುಗೊಲ್ಲರಿಗ್ಯಾಕೆ ಸಾರುಪ್ಪಿನ ಕಾಯಸುದ್ದಿ ಎನ್ನುತ್ತಾಳೆ ತಮ್ಮಂದಿರು ಬಂದು ಹೇಳಿದ ಮ್ಯಾಲೆ ಜುಂಜಪ್ಪ ತಾನೆ ಹೋಗಿ ಕೇಳಿದ ಅದಕ್ಕೆ ಜೋಗಿ ಜಂಗಮರಿಗೆ ಮೊದಲು ಕೊಟ್ಟ ಕೊಡುತ್ತಿನಿ ಎಂದಳು ಅವರು ಬಂದು ಹೋದರೆ ಕಂಡಿತ ಕೊಡುತ್ತಿಯಾ ಎಂದು ಹೇಳಿದಾಗ, ಜುಂಜಪ್ಪ ಬೇಲಿಯ ಪಕ್ಕಕ್ಕೆ ಹೋಗಿ ಜೋಗಿ, ಜಂಗಮ, ದಾಸಯ್ಯ ಎಲ್ಲರ ವೇಷವನ್ನ ಹಾಕಿ ಬಂದರು ಅವರಿಗೆ ಒಡೆದು ಕಳುಹಿಸುತ್ತಾಳೆ. ಜಾನಕಲ್ಲು ದೊಡ್ಡಕ್ಕನಿಗೆ ಕೊಡುವುದಕ್ಕೆ ಮನಸ್ಸಿರೊದಿಲ್ಲ ಎಷ್ಟೆ ಪ್ರಯತ್ನ ಪಟ್ಟಾರು ಜುಂಜಪ್ಪನಿಗೆ ಕೊಡದೆ ಕಾಡುಗೊಲ್ಲನಿಗ್ಯಾಕೆ ಅವರೆಕಾಯಿ ಚಿಂತೆ ಎನ್ನುತ್ತಾಳೆ.

ಜುಂಜಪ್ಪ ಇವಳು ಎಂತಹ ಕೆಟ್ಟ ಹೆಂಗಸು ಇವಳನ್ನ ಏನಾದರೂ ಮಾಡಿಸಾಯಿಸಬೇಕೆಂದು ಕೊಂಡು ನಾಗೇಂದ್ರವನನ್ನು ಕರೆದು ಇವಳ ಸೀರೆಯೊಳಗೆ ಸೇರಿಕೊಂಡು ಒಳದೊಡೆಯನ್ನ ಕಚ್ಚಿ ವಿಷವೆಲ್ಲಾ ಮೈಗೆ ಏರುವ ಹಾಗೆ ಮಾಡು ಎಂದು ಹೇಳಿದ, ಹಾಗೆಯೇ ಬಸವನಿಗೆ ನೀನು ಮಾಯದಿಂದ ಅವರೆ ಹೋಲಕ್ಕೆ ಹೋಗಿ ಎಲ್ಲವನ್ನು ತಿಂದು ಹಾಕು ಎಂದು ಹೇಳಿದ ಅದರಂತೆ ಬಸವ ಹೊಗಿ ದೊಡ್ಡಕ್ಕಜ್ಜಿಯ ಕಣ್ಣಿಗೆ ಕಾಣದ ರೀತಿಯಲ್ಲಿ ಮೂರುಗೊನೆ ಅವರೆ ಕಾಯಿಯನ್ನು ಬಿಟ್ಟು ಎಲ್ಲಾ ಕಾಯಿಯನ್ನ ತಿಂದು ಹಾಕಿತು. ಇದನ್ನೆಲ್ಲಾ ನೋಡಿದ ದೊಡ್ಡಕ್ಕಜ್ಜಿ ಇದು ಜುಂಜಪ್ಪನ ಕೆಲಸವೇ, ಎಂದು ಅವನನ್ನು ಬೈಯ್ಯುವಾಗ ಎಳನಾಗರಿ ಮರಿ ಹೋಗಿ ಅವಳ ತೊಡೆಯನ್ನ ಕಜ್ಜಿ ಸಾಯಿಸಿತು.

"ಅತ್ತುತ್ತಾ ನಣ್ಣ

ಎಳಾಳುದ್ದ ಮಂಚಿಕೆ

ನಾಗೇಂದ್ರ ಗಾಳಿಗಾಗೋ"[56]

ಹೊನ್ನಟ್ಟಲೇಗೌಡಲೇ ಗೌಡನಿಗೆ ವಿಷಯ ತಿಳಿದು ಮೊಮ್ಮಗನ ಹತ್ತಿರಬಂದು ನಿನ್ನ ಹೊಲದಲ್ಲಿ ನೀನು ಕಿತ್ತುಕೊಂಡು ಹೋಗಬೇಕಿತ್ತು. ಅವಳನ್ನು ಏಕೆ ಕೇಳಿದೆ ಎಂದು ಹೇಳಿದಾಗ ಜುಂಜಪ್ಪ ಅವಳು ಸಾಯಲಿ ನಾನು ನಿನ್ನನ್ನು ಕಾಲುಬೇರಕೆ ಕೈಲಾಸಕ್ಕೆ ಕಳುಹಿಸುತ್ತೇನೆ ಎಂದಾಗ ಅವರಜ್ಜ ಒಪ್ಪುವುದಿಲ್ಲ ನಾನು ಸಾಯುತ್ತೇನೆ. ಎಂದಾಗ ಹದಿನೈದು ದಿನದ ವರೆಗೆ ಹಣವನ್ನು ಕಾಯ್ದಿರು ಆ ಮೇಲೆ ಪ್ರಾಣ ಬರಿಸುತ್ತೇನೆ. ಎನ್ನುತ್ತಾನೆ. ಆಗ ಆ ಹೆಣವನ್ನು ಕಾವಲು ಕಾಯುತ್ತಾರೆ.

ವಡ್ಡರ ಹನುಮಣ್ಣ ಎಂಬುವನು ಊರ ಪಾಳೇಗಾರನಿಗೆ ಈ ವಿಷಯವನ್ನ ಹೇಳಿ ಜುಂಜಪ್ಪನನ್ನ ಕೊಂದಾಕಬೇಕು ಯುದ್ಧ ಮಾಡಬೇಕು ಎಂದು ಹೇಳುತ್ತಾನೆ ಅದನ್ನು ತಿಳಿದ ಜುಂಜಪ್ಪ ಅವನ ಹೆಂಡತಿ ಮಕ್ಕಳನ್ನು ಸಾಯಿಸುತ್ತಾನೆ. ವಡ್ಡರ ಹನುಮಣ್ಣ ತಪ್ಪನ್ನೆ ಒಪ್ಪಿಕೊಂಡಾಗ ಅವರನ್ನು ಬದುಕಿಸುತ್ತಾನೆ. ಪಾಳೇಗಾರ ಸಿರೆದ್ರಂಗಣ್ಣ ಜುಂಜಪ್ಪನ ಮ್ಯಾಲೆಯುದ್ಧಕ್ಕೆ ತಾಯಿ ಬೇಡವೆಂದರು ಕೇಳದೆ ಬರುತ್ತಾನೆ. ಜುಂಜಪ್ಪ ಮಾಯದ ಕುದುರೆಯನ್ನ ದೇವಲೋಕದಿಂದ ತರಸಿ ಅವರಲ್ಲಿ ಯುದ್ಧ ಮಾಡಿ ಪಾಳೇಗಾರ ಸಿರೆದ್ರಂಗಣ್ಣ ನನ್ನ ಹತ ಮಾಡುತ್ತಾನೆ.

---

[56] ಚಲುವರಾಜು, ಬುಡಕಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 629.

ಹದಿನೈದು ದಿನ ಕಳೆದ ಮೇಲೆ ಅವರ ತಾತ ಬಂದು ಅಜ್ಜಿಯನ್ನ ಬದುಕಿಸುವಂತೆ ಕೇಳಿದಾಗ ಅವಳನ್ನ ಬದುಕಿಸುತ್ತಾನೆ. ದೊಡ್ಡಕ್ಕಜ್ಜಿ ಪಶ್ಚಾತ್ತಾಪದಿಂದ ನಿನ್ನ ಹೊಲದಲ್ಲಿ ನೀನು ಅವರೆ ಕಾಯಿಯನ್ನು ತೆಗೆದುಕೊಂಡು ಹೋಗಬೇಕಿತ್ತು ನನ್ನನ್ನೆಕೆ ಕೇಳಿದೆ ಎಂದು ತಪ್ಪು ಒಪ್ಪಿಕೊಳ್ಳುತ್ತಾಳೆ. ಬಸವ ಬಿಟ್ಟದ್ದ ಮೂರುಗೊನೆ ಅವರೆ ಕಾಯಿಯನ್ನು ಕೂಯ್ದು ದೀಪಾವಳಿ ಹಬ್ಬವನ್ನ ಎಲ್ಲರೂ ಸಂತೋಷದಿಂದ ಆಚರಿಸುತ್ತಾರೆ.

ಸುಳ್ಳನ್ನ ಹೇಳಿದರೆ ಜುಂಜಪ್ಪ ಯಾವ ರೀತಿಯ ಶಿಕ್ಷೆಯನ್ನು ಕೊಡುವುದನ್ನ ಕಾಣಬಹುದು.

### ಸ್ವಾದರ ಮಾವುಗಳು ವಿಷವಿಕ್ಕದ ಸಂದು

ದೊಡ್ಡಕ್ಕಜ್ಜಿಯನ್ನ ಬದುಕಿಸಿದ ಮೇಲೆ ದೀಪಾವಳಿಯನ್ನ ಮಾಡಿಕೊಂಡು ಸುಖವಾಗಿದ್ದರು, ಇತ್ತಕಡೆ ಕಂಬೇರು ಗೊಲ್ಲರು ಜುಂಜಪ್ಪನನ್ನ ಏನಾದರೂ ಮಾಡಿ ಸಾಯಿಸಬೇಕೆಂದು ಸಂಚು ಹೂಡಿ ವಿಷದ ಕಜ್ಜಾಯ, ದತ್ತೂರಿ ಪಾಯಸವನ್ನ ಮಾಡಿ ಬಡಿಸಬೇಕು. ಎಂದುಕೊಂಡು ಜುಂಜಪ್ಪನನ್ನ ಕರೆಯಲು ತಂಗಿಯ ಮನೆಗೆ ಹೋದರು ಕಂಬೇರು ಗೊಲ್ಲರು ಸಿನ್ನಮ್ಮನನ್ನ ಮಾತಿಗೆ ಸಿಕ್ಕಿಸಿಕೊಳ್ಳುವುದಕ್ಕೊಸ್ಕರ ಅವರನ್ನ ನಮ್ಮ ಮನೆಗೆ ದೀಪಾವಳಿ ಹಬ್ಬಕ್ಕೆ ಕಳುಹಿಸುತ್ತೇನೆ. ಎಂದು ಭಾಷೆಯನ್ನು ತೆಗೆದುಕೊಂಡರು ಮಕ್ಕಳಿಗೆ ಸಿನ್ನಮ್ಮ ನಿಮ್ಮ ಸೋದರ ಮಾವರು ಬೇಜಾರು ಮಾಡಿಕೊಳ್ಳತ್ತಾರೆ. ನಾನು ಭಾಷೆ ಕೊಟ್ಟಿದ್ದೇನೆ. ನೀನು ಕಂಡಿತ ಹೋಗಲೇಬೇಕು. ಎಂದು ಮಕ್ಕಳಿಗೆ ಹೇಳುತ್ತಾಳೆ.

ಕಂಬೇರುಗೊಲ್ಲರು ಸಂಚನ್ನ ಹರಿತ ಜುಂಜಪ್ಪ, ತಮ್ಮಂದಿರಿಗೆ ಹೇಳುತ್ತಾನೆ. ಇದರಿಂದ ತಾಯಿಯನ್ನ ಬಿಟ್ಟು ಹೋಗುವಾಗ ಮಾರಣ್ಣ ಮೈಲಾಣ್ಣ ತಾಯಿಯನ್ನ ತಬ್ಬಿಕೊಂಡ ಬಿಕ್ಕಿ ಅಳುತ್ತಾರೆ. ಜುಂಜಪ್ಪ ತಮ್ಮಂದಿರಿಗೆ ಸಮಾಧಾನ ಮಾಡಿ ತಾಯಿಗೆ ವಿಷಯ ತಿಳಿದರೆ ಹೋಗಬೇಡಿ ಎನ್ನುತ್ತಾಳೆ. ನಮ್ಮ ತಾಯಿಕೊಟ್ಟ ಭಾಷೆ ಸುಳ್ಳಾಗುತ್ತದೆ ಅದರಿಂದ ತಾಯಿಗೆ ಹೇಳೊಂದು ಬೇಡಿ ಹೋಗುವ ಎನ್ನುತ್ತಾನೆ.

ಕಂಬೇರುಗೊಲ್ಲರು ದೀಪಾವಳಿಯ ಹಬ್ಬದ ಅಡಿಗೆಯನ್ನು ಹಾಕಿ, ವಿಷದ ಕಜ್ಜಾಯವನ್ನು ಇಕ್ಕಿದಾಗ ನಾಯಿಗೆ, ಬೆಕ್ಕಿಗೆ ಹಾಕಿ ಅವು ಅಲ್ಲೆ ಅತ್ತೊದೊ ಜುಂಜಪ್ಪ ತಮ್ಮಂದಿರು ನೀನು ಸತ್ತೋಗಿ ನಾವು ಬದುಕಿದರೆ ಏನು ಪ್ರಯೋಜನ ಎಂದು ಅವರು ಅವನುಕೈಯಿಂದ

ಒಂದೊಂದು ತುತ್ತನ್ನು ಕಿತ್ತುಕೊಂಡು ತಿನ್ನುತ್ತಾರೆ. ಎಲ್ಲರಿಗೂ ಹೊಟ್ಟೆಯುರಿ ಸುರುವಾಗಿ ಗೋಳಾಡುತ್ತ ಹೊರಳಾಡುತ್ತಾರೆ. ಹಾಗ ಜುಂಜಪ್ಪ

"ಆ ಸ್ಯಾವೆ ಉಲುತ್ತಿ
ಗರಿ ಎತ್ತಿ ಜುಂಜಪ್ಪ
ಬಿಲ್ಲೋಡ್ಡಿ ಮಂಡೆ ವರಿರ್‍ಯವುನೋ
ಸ್ಯಾವೆ ಉಲ್ಲನು
ಬೆಂಕಿ ಅಬಿಯೊಳುಗೆ
ಜುಂಜಪ್ಪ ಮಾರಣ್ಣ ಮೈಲ್ಲಣ್ಣ
ಕಂಕುಳು ಕವುಸಿಗೊಂಡು ತಮ್ಮುಗಳನ್ನ
ಕಾಲು ಬೆರಸೆ ಕೈಲಾಸಕ್ಕೊದಾನೋ
ಜುಂಜಪ್ಪಗಳಿಗಾಗೋ"[57]

ಅಲ್ಲದೆ ಜುಂಜಪ್ಪನಿಗೆ ಹದಿನಾರು ವರ್ಷ ತುಂಬಿರುತ್ತದೆ. ಅಲ್ಲಿ ಶಿವ ಇವರ ಗೋಳಾಟವನ್ನ ನೋಡಿ ತೀರ್ಥವನ್ನ ಮೇಲೆ ಚಿಮುಕಿಸುತ್ತಾನೆ. ಹೊಟ್ಟೆಯ ಹುರಿ ನಿಲ್ಲಿತ್ತದೆ. ಒಬ್ಬ ದೇವತೆಯನ್ನ ಭೂಲೋಕಕ್ಕೆ ಕಳುಹಿಸುತ್ತಾನೆ. ಜುಂಜಪ್ಪನಿಗೆ ಶಿವನು, ಲಿಂಗಕ್ಕಿಂತಲೂ ನಿನಗೆ ಭೂಲೋಕದಲ್ಲಿ ಹೆಚ್ಚಿನ ಪೂಜೆಸಿಗಲಿ ಎಂದು ಕಂಬೇರುಗೊಲ್ಲರು ದ್ವಾರಿಪಾಲಕರಾಗಿರಲಿ ಎಂದು ಆರ್ಶಿವಾದ ಮಾಡುತ್ತಾನೆ.

ಇಲ್ಲಿ ದೇವಸಂಭೂತರಾದವರಿಗೂ ನೋವು ತಪ್ಪಿದ್ದಲ್ಲ ಎಂಬುವುದನ್ನು ನೋಡಬಹುದು. ಏನಾದರೂ ಮಾಡಿ ತಂಗಿಯ ಮಗನನ್ನ ಸಾಯಿಸಬೇಕೆಂಬ ಕಂಬೇರು ಗೊಲ್ಲರ ಹಠ ನೆರವೇರಿಸಿದನ್ನ, ದೇವರಿಗೂ ಮನುಷ್ಯರಿಗೂ ಹೆಚ್ಚಿನ ಅಂತರ ಇಲ್ಲಿ ಕಾಣುವುದಿಲ್ಲ. ಕಂಬೇರುಗೊಲ್ಲರು ಜುಂಜಪ್ಪ ಅವನ ತಮ್ಮಂದಿರು ಸತ್ತರೆಂದು ಖುಷಿಯಿಂದ ದೀಪಾವಳಿ ಹಬ್ಬವನ್ನು ಆಚರಿಸುತ್ತಾರೆ.

[57] ಚಲುವರಾಜು, ಬುಡಕಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 664.

ಜುಂಜಪ್ಪ, ಮಾರಣ್ಣ, ಮೈಲಣ್ಣ, ಕಾಲು ಸಹಿತ ಕೈಲಾಸಕ್ಕೆ ಹೋದಾಗ ಕಂಬೇರುಗೊಲ್ಲರು ಅವರನ್ನು ಸತ್ತರು ಎಂದು ಸಂತೋಷ ಪಟ್ಟರು ಇವರನ್ನು ಸಂಹಾರ ಮಾಡುವುದಕ್ಕಾಗಿ ನರಲೋಕಕ್ಕೆ ಇಳಿದು ಬಿಟ್ರು ಕಂಬೇರಟ್ಟಿದಿನ್ನಿಗೆ ಉರಿ ಬಾಣಕ್ಕೆ ಬೆಂಕಿ ತುಂಬಿ ಜುಂಜಪ್ಪ, ಮಾರಣ್ಣ, ಮೈಲಣ್ಣನ ಕೈಯಲ್ಲಿ ಕೊಟ್ಟು ಸುಟ್ಟ ಹೋಗುತ್ತಾಳೆ ಎಂದು ಯೋಚಿಸಿ ಅದನ್ನು ಜುಂಜಪ್ಪನಿಗೆ ಹೇಳಿದಾಗ ಅವನ್ನು ಅವರ ಕೈಯಿಂದ ಬಾಣವನ್ನು ಕತ್ತುಕೊಂಡು

"ಲೇ

ಕೊಟ್ಟೆಣ್ಣು ಕುಲುಕೊರಗ್ಲಿ

ಎಟ್ಟಲೆ ಮಾರುಮ್ಮೈಲೆ ಬೆಂಕಿನ ಇನ್ನ

ಮಕ ನೋಡುತೀರೆ ಎಂದು

ಬಾಣ ಕಿತ್ತು ಗಂಡು ಜುಂಜಪ್ಪ

ಸೇದಿಸಿ

ಸೇದಿಸಿ

ಬಿಟ್ಟಾನು

ಉರಿಬಾಣು ಗೊಳೋ ಶಿವುನೀಗೋ"[58]

ಹೀಗೆ ಬಾಣವನ್ನು ಬಿಟ್ಟು ತಂಗಿಯ ಮೇಲಿನ ಕನಿಕರದಿಂದ ಜುಂಜಪ್ಪ ಚಕ್ರದ ಕೊಡೆಯನ್ನು ಒಡ್ಡುತ್ತಾನೆ. ಮಾರಕ್ಕ ಅಣ್ಣಂದಿರನ್ನು ನೆನೆಸಿಕೊಂಡು ಸಾಮೆಯನ್ನು ಕುಟ್ಟುತ್ತಿರುತ್ತಾಳೆ. ಇವಳ ಅರಿವಿಗೆ ಬರದ ಹಾಗೆ ಎಲ್ಲರೂ ಸುಟ್ಟೊದರು ಹಾಗ ಮಾರಣ್ಣ. ಮೈಲಣ್ಣ ನಮ್ಮ ತಂಗಿಯ ಸುಟ್ಟೊದಳು ಎನ್ನುವಾಗ ಅಳ್ಳಿ ಮರದ ಒಂದು ಎಲೆ ಇದ್ದರೆ ಮಾತ್ರ ನಿನ್ನ ತಂಗಿ ಬದುಕಿರುತ್ತಾಳೆ ಎಂದು ನೋಡಿದಾಗ ಒಂದು ಎಲೆ ಇರುತ್ತದೆ. ತಂಗಿ ಬದುಕಿದ್ದಾಳೆ ಎಂದುಕೊಳ್ಳುತ್ತಾರೆ. ತಂಗಿ ಎಲ್ಲವನ್ನು ನೋಡಿ ನನ್ನ ಗಂಡ ಸತ್ತಮೇಲೆ ನಾನು ಯಾಕೆ ಈ ಮಗುವು ಅವರ ವಂಶದ್ದು ಸಾಯಿಸಿ ಎಂದಾಗ ಕಂಬೇರು ಗೊಲ್ಲರ ವಂಶದಿವರು ಕೆಟ್ಟವರಲ, ಅವರು ಶಿವನ ದ್ವಾರ

[58] ಚಲುವರಾಜು, ಬುಡಕುಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 673.

ಪಾಲಕರು, ನಮಗೆ ಕಷ್ಟ ಕೊಡುವುದಕ್ಕಾಗಿ ಹುಟ್ಟಿ ಬಂದವರು ಎಂದರು ಮಗುವಿನಿಂದ ಕಂಬೇರುಗೊಲ್ಲರ ಮಗ ಬೆಳೆಯಲಿ ಎನ್ನುತ್ತಾರೆ.

ತಂಗಿಗೆ ನಿನ್ನ ಮಗು ಹುಟ್ಟಿದ ಮೇಲೆ ಕೆಂಡಕೊಂಡವಾಗಿ ಹಟ್ಟಿ ಮಾರಮ್ಮ ಎಂಬ ಹೆಸರಿನ ದೇವತೆಯಾಗು ಎಂದು ಹೇಳಿ, ತಾಯಿಗೆ ತಂಗಿಗೆ ಹೆರಿಗೆಯಾಗುವರೆಗೆ ಇದ್ದು ಆ ಮೇಲೆ ಕಾಲು ಸಹಿತ ಕೈಲಾಸಕ್ಕೆ ಬಾ ಎಂದು ಹೇಳುತ್ತಾನೆ. ಅದರಂತೆ ಇವರಿಬ್ಬರೂ ನಡೆದು ಕೊಳ್ಳುತ್ತಾರೆ.

ಮಾರಣ್ಣ, ಮೈಲಣ್ಣ, ಜುಂಜಪ್ಪ ಹೊನ್ನಟ್ಟಾಲೇಗೌಡನ ಮನೆಗೆ ಬಂದು ನಮ್ಮ ಒಡವೆನೆಲ್ಲ ಒಂದು ಚೀಲದಲ್ಲಾಕಿ ಕಟ್ಟಿ ಎಂದರು, ಜುಂಜಪ್ಪನ ಒಡವೆಗಳೆಲ್ಲಾ ಒಂದು ಚೀಲ, ಇವರಿಬ್ಬರದು ಒಂದು ಚೀಲ, ವ್ರಡ್ರನುಮಣ್ಣಿ ಪಚ್ಚೆಕಲ್ಲಿನ ಸಮಾಧಿ ಕಟ್ಟುತ್ತಿನಿ ಎಂದು ಹರಕೆ ಮಾಡಿದ್ದನು. ಅದರಂತೆ ಒಡವೆಯನನು ತೆಗೆದುಕೊಂಡು ಹೋಗುವುದಕ್ಕೆ ಅಗಸರವನ್ನು ಮಡಿಹಾಸುವುದಕ್ಕೆ ಬರುವುದಿಲ್ಲ ಎಂದಾಗ ಅವನು ಬರುವ ಹಾಗೆ ಮಾಡಿದನು. ಗುಡ್ಡೆದ ಮಲ್ಲಣ್ಣ. ಹರೆ ಬಡಿಯುವುದಕ್ಕೆ ನಿರಾಕರಿಸಿದಾಗ ಅವನಿಗೂ ಮಹಿಮೆಯನ್ನು ತೋರಿ ಹರೆ ಬಡಿಯುವ ಹಾಗೆ ಮಾಡಿದನು. ಪೂಜಾರಿಗೂ ಮಹಿಮೆಯನ್ನು ತೋರಿ ಮಳೆ ತರುತ್ತಾನೆ. ಮಲ್ಲಿಗುಡ್ಡದ ರಂಗಪ್ಪ ಸವಾಲು ಹಾಕಿ ಬಂಗಾರದ ತೂಗುಮಂಚ ನಿನಗೆ ಕೊಡುತ್ತೇನೆ. ಎನ್ನುತ್ತಾನೆ. ಅದರಂತೆ ಮಳೆ ತರಿಸಿ ತೂಗುಮಂಚ ಗೆಲ್ಲುತ್ತಾನೆ.

ಮಳೆ ಒಂದು ಪುರ್ಸಕ್ಕನ ಕೆರೆ ತುಂಬಿದ ಮೇಲೆ ಜುಂಜಪ್ಪನ ತಾತ ಒಡವೆಗಳನ್ನು ತೆಗೆದುಕೊಂಡು ಕೆರೆಗೆ ಹೋಗಿ ಮೂರು ದಿನವಾದರೂ ಬರದಿದ್ದಾಗ ಜನ ಎಲ್ಲಾ ಸತ್ತೊಂದ ಎಂದು ಹೇಳುತ್ತಿದ್ದರು. ಆದರೆ ಗುಡ್ಡದ ಮಲ್ಲಣ್ಣ ಜುಂಜಪ್ಪ ಅವರ ತಾತನನ್ನು ಸಾಯೋಕೆ ಬಿಡುವುದಿಲ್ಲ ಎಂದು ಕೊಳ್ಳುತ್ತಿದ್ದನು. ತಾತಪ್ಪ ಮೇಲೆ ಒಡವೆಗಳನ್ನು ತೆಗೆದುಕೊಂಡು ಬಂದ.

"ಆಗ ಜುಂಜಪ್ಪನ ಜಲ್ದಿ ಮಾಡಿದ್ರು.

ಜಲ್ದಿ ಪೂಜೆ ಆಗುವಾಗ

ಆಕಾಶದ ಘಂಟೆ ಘುಲೀಕೆಂದು

ಪೂಜೆ ಪೂಜಾರಿ ಸಿತ್ತಯ್ಯ ಪೂಜೆ ಮಾಡಿದ್ದೆ."[59]

ಹೀಗೆ ಜುಂಜಪ್ಪ ಜಲ್ದಿ ಮಾಡುವಾಗ ಪ್ರಕೃತಿಯಲ್ಲಿ ವಿಸ್ಮಯವಾಯಿತು. ಜುಂಜಪ್ಪನ ಎದೆ ಒಳಗಲ ಲಿಂಗ ಬೇವುತ್ತೊಯಿತು. ಒಡವೆಗಳನ್ನೆಲ್ಲಾ ಸಮಾಧಿಗೆ ಹೊರಿಸಿಕೊಂಡು ಹೋಗುವಾಗ ನನಗೆ ಸಾವು ಬೇಕೆಂದ ಸಿತ್ತಯ್ಯ ಪೂಜಾರಿಗೆ ಸಾವನ್ನ ತಂದು ಕೊಡುತ್ತಾನೆ. ಜುಂಜಪ್ಪನ ಒಡವೆಯನ್ನ ಅವರಜ್ಜಿ ಹೊನ್ನಟೀಗೌಡ ತಲೆಯ ಮೇಲೆ ಹೋತ್ತುಕೊಂಡು ಹೋಗಿ ಸಮಾಧಿಗಿಟ್ಟ ಆಗ ಮದ್ಯದಲ್ಲಿ ಜುಂಜಪ್ಪನ ಸಮಾಧಿ ಆಕಡೆ, ಈಕಡೆ ಮಾರಣ್ಣ, ಮೈಲಣ್ಣನ ಸಮಾಧಿಯಾದರು ಅವರಜ್ಜ ಅಲೇಗೌಡನ ಸಮಾಧಿ ಪಕ್ಕ ಜಾನ್ನಲ್ಲುದೊಡ್ಡಕ್ಕನ ಸಮಾದಿ, ಕೆಂಗರು ಮಲ್ಲೇಗೌಡರ ಸಮಾಧಿಯಾದರು.

"ಅಲ್ಲಿಗೆ ದೇವರಾದ್ರಣ್ಣ

ದೊಡ್ಡೋನು ಜುಂಜಪ್ಪ"

ಲೋಕುಕ್ಕು ದೊಡ್ಡೋನು ಗಳೆಗಾಗೋ"[60]

ಹೀಗೆ ಈ ಸಂದು ಸೋದರ ಮಾವಂದಿರನ್ನು ಕೊಂದು ಅವನ ಮಹಿಮೆಯನ್ನು ತೋರಿ ಸ್ವತಹ ತಾನೆ ದೇವರು ಅಂತ ಹೇಳಿಕೊಂಡು ದೇವರಾದ ಜುಂಜಪ್ಪ ಈ ಕಾವ್ಯ ಒಂದು ವಿಶಿಷ್ಟ ಕಾವ್ಯ ಎನಿಸುತ್ತದೆ. ಈ ಕಾವ್ಯ ಒಂದು ಜನಾಂಗದ ಇತಿಹಾಸ ಅವರ ಆಚಾರ ವಿಚಾರಗಳನ್ನು ತಿಳಿಸುವಲ್ಲಿ ಯಶಸ್ವಿಯಾಗಿರುವುದನ್ನು ನೋಡಬಹುದು, ಕಷ್ಟಕರವಾದ ಶಬ್ಧಗಳನ್ನು ಉಪಯೋಗಿಸಿದೆ ಸಾಮಾನ್ಯ ಶಬ್ಧಗಳನ್ನು ಉಪಯೋಗಿಸಿ ಕಾವ್ಯ ಕಟ್ಟಿದ್ದಾರೆ.

---

[59] ಚಲುವರಾಜು, ಬುಡಕುಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 693.

[60] ಚಲುವರಾಜು, ಬುಡಕುಟ್ಟ ಮಹಾ ಕಾವ್ಯ ಮಾಲೆ ಜುಂಜಪ್ಪ, ಪುಟಸಂಖ್ಯೆ 696

# ಅಧ್ಯಾಯ – 6

# ಜುಂಜಪ್ಪನ ಕಾವ್ಯದ ಮಹತ್ವ

**ಸಾಮಾಜಿಕ ನೆಲೆ**

ಊರುಗಳಿಂದ ಹೊರಗೆ ಕಾಡುಗಳಲ್ಲಿ ಇವರು ವಾಸಮಾಡುವುದರಿಂದ ಬಹುಶಃ ಇವರಿಗೆ ಕಾಡುಗೊಲ್ಲರು ಎಂಬ ಹೆಸರು ಬಂದಿರಬೇಕು. ಇವರ ಹಟ್ಟಿಗಳಲ್ಲಿ ಬೇರೆಯವರು ವಾಸಮಾಡುವುದಕ್ಕೆ ಅಥವಾ ಇಲ್ಲಿಗೆ ಬೇರೆಯ ಜನಾಂಗವರು ಬರುವುದಕ್ಕೆ ಅವರು ಅವಕಾಶ ನೀಡುವುದಿಲ್ಲ. ಈ ನಿಯಮದಿಂದಲೇ ಇರಬೇಕು ಇವರು ಬೇರೆ ಜನಾಂಗಕ್ಕಿಂತ ವಿಶಿಷ್ಟ ರೀತಿಯಲ್ಲಿ ಇರುವುದನ್ನು ಕಾಣಬಹುದಾಗಿದೆ. ತಮ್ಮ ಆಚಾರ ವಿಚಾರದಿಂದಲು ನಾವು ವಿಭಿನ್ನ ಎಂಬುವುದನ್ನು ತೋರಿಸಿಕೊಟ್ಟಿದ್ದಾರೆ. ಹಾಗೆಯೇ ಇವರು ತಮ್ಮ ಸಂಸ್ಕೃತಿಯಿಂದ ಇತರ ಜನಾಂಗದಿಂದ ವಿಶಿಷ್ಟವಾಗಿ ಇರುವುದನ್ನು ನೋಡಬಹುದಾಗಿದೆ. ತಮ್ಮ ವೈಶಿಷ್ಯವನ್ನು ಕಾಪಾಡಿಕೊಂಡು ಬಂದಿದ್ದಾರೆಲ್ಲದೆ, ಇವರದೆಯಾದ ಕೆಲವು ವಿಶಿಷ್ಟ ಸಂಪ್ರದಾಯಗಳನ್ನು ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ.

ನಮ್ಮ ಹುಟ್ಟು ಕೃಷ್ಣನಿಂದ ಸುರುವಾಯಿತು. ನಮ್ಮದು ನಂದಮೂಲ ಪುರುಷ ಕೃಷ್ಣ ಎಂದು ನಂಬಿದ್ದು, ನಾವು ಕೃಷ್ಣನ ವಂಶದವರು ಗೋಕುಲ ವಂಶದವರೆಂದು ಹೇಳಿಕೊಳ್ಳುತ್ತಾರೆ. ಇವರು ನಾವು ವೈಷ್ಣವರು ಎಂದು ಹೇಳಿಕೊಳ್ಳುತ್ತಾರಾದರೂ, ಇತರ ಜನಾಂಗದವರಂತೆ ಎಲ್ಲಾ ದೇವರನ್ನು ಪೂಜಿಸುವುದನ್ನು ಕಾಣಬಹುದು. ಕಾಡುಗೊಲ್ಲರು ತಮ್ಮ ಹಲವು ಸಂಪ್ರದಾಯಗಳನ್ನು ವಿಶಿಷ್ಟವಾಗಿ ಉಳಿಸಿಕೊಂಡು ಬಂದಿರುವುದನ್ನು ಅವರ ಆಚಾರವಿಚಾರಗಳಿಂದ ನಿಯಮಗಳಿಂದ ಕಾಣಬಹುದಾಗಿದೆ.

ಕಾಡುಗೊಲ್ಲರಲ್ಲಿ ಮದುವೆ ತುಂಬಾ ಸರಳವಾಗಿ ನಡೆಯುತ್ತದೆ. ಇವರಲ್ಲಿ ಕೆಲವು ನಿಯಮಗಳನ್ನು ಇವರು ಅನುಸರಿಸುತ್ತಾರೆ. ಎಲ್ಲಾ ಜನಾಂಗದವರಂತೆ, ಇವರು ಹೆಣ್ಣನ್ನು ಹಗಲಿನ ವೇಳೆಯಲ್ಲಿ ನೋಡುವುದಕ್ಕೆ ಹೋಗದೆ, ಸಂಜೆಯ ಸಮಯದಲ್ಲಿ ಹೋಗುತ್ತಾರೆ ಇದು ಕೆಲವಾರು ಜನಾಂಗದಲ್ಲಿ ಅಶುಭ. ಹಾಗೆಯೇ ಹೆಣ್ಣನ್ನು ನೋಡುವುದಕ್ಕೆ ಹೋಗುವಾಗ ಹೊಸ ಮಡಿಕೆಯವರು ಸಿಕ್ಕರೆ ಮುಂದಕ್ಕೆ ಹೋಗುವುದಿಲ್ಲ. ಆದರೆ ಇವರು ಹೆಣ್ಣು ನೋಡುವುದಕ್ಕೆ ಹೋಗುವಾಗಲೇ ಚಿತ್ತಾರದಿಂದ ಬಿಡಿಸಿದ ಹೊಸ ಮಡಿಕೆಯನ್ನು ಜೊತೆಯಲ್ಲಿ ತೆಗೆದುಕೊಂಡು ಹೋಗುವುದನ್ನು ಕಾಣಬಹುದು. ಇವರು ಸಂಜೆಯ ವೇಳೆಯಲ್ಲಿ ಹೆಣ್ಣನ್ನು ನೋಡುವ ಪರಿಪಾಠ

ಇವರು ಹಗಲು ವೇಳೆ ದನಗಳನ್ನು, ಕುರಿಗಳನ್ನು ಮೇಯಿಸುವ ಕಾರ್ಯದಲ್ಲಿ ತೊಡಗಿಸಿಕೊಳ್ಳುವುದರಿಂದ ಅದಕ್ಕೆ ಒಂದು ದಿನ ಮೀಸಲಿಟ್ಟರೆ ಅವುಗಳಿಗೆ ಮೇವು ಇಲ್ಲದೆ ಹೋಗುತ್ತದೆ. ಆ ದಿನದ ಕೆಲಸ ಕಾರ್ಯನಿಂತು ಹೋಗಬಹುದೆಂದು ಯೋಚನೆ ಇರಬೇಕು. ಇದು ಸಂಪ್ರದಾಯವಾಗಿ ಮುಂದುವರಿದುಕೊಂಡು ಬಂದಿರಬೇಕು.

ದೀಪದ ಶಾಸ್ತ್ರ ಇವರಲ್ಲಿ ಬಹಳ ಮುಖ್ಯವಾದುದು. ಇವರು ಹೆಣ್ಣನ್ನು ನೋಡುವುದಕ್ಕೆ ಹೋದಾಗ ಅವರ ಮನೆಯ ದೀಪಕ್ಕೆ ಎಣ್ಣೆಯನ್ನು ಹಾಕಿ ಪೂಜೆ ಮಾಡುತ್ತಾರೆ. ಅದು ರಾತ್ರಿ ಸರಿಯಾಗಿ ಉರಿದರೆ ಆ ಮದುವೆ ನಡೆಯುತ್ತದೆ. ಇದೊಂದು ಇವರ ಸಂಪ್ರದಾಯ ಇದನ್ನು ಹೆಣ್ಣಿನವರು ಗಂಡಿನ ಮನೆಯಲ್ಲಿಯು ಮಾಡುತ್ತಾರೆ.

ಕಾಡುಗೊಲ್ಲರ ಮದುವೆಯ ಶಾಸ್ತ್ರಗಳು ಒಕ್ಕಲಿಗ ಜನಾಂಗದಲ್ಲಿ ಕಂಡು ಬರುವಂತೆಯೇ ಇವರಲ್ಲಿಯು ದೇವರು ತರುವುದು, ಚಪ್ಪರಕೊನೆ ಕಡಿಯುವುದು ಕಂಡು ಬರುತ್ತವೆ. ಆದರೆ ಹಾಲನ್ನು ತಲೆಗೆಹೊತ್ತುವುದು ಮಾತ್ರ ಇವರಲ್ಲಿ ವಿಶಿಷ್ಟವಾಗಿ ಕಂಡು ಬರುತ್ತದೆ. ಕಾಡುಗೊಲ್ಲರ ಜೀವನದಲ್ಲಿ ಹಾಲೇ ಜೀವನಾಧಾರವಾಗಿರುವುದರಿಂದ ಈ ಹಾಲು ಎಲ್ಲಾ ಸಂದರ್ಭದಲ್ಲಿಯು ಪ್ರಮುಖ ಪಾತ್ರವನ್ನು ವಹಿಸುತ್ತದೆ. ಎನಿಸುತ್ತದೆ. ಗಂಡು ಹೆಣ್ಣು ಇಬ್ಬರ ತಲೆಗೂ ಹಾಲನ್ನು ಹೊತ್ತುತ್ತಾರೆ. ಬೂವತೀರಿಸುವ ಶಾಸ್ತ್ರವು ಸಹ ವಿಶಿಷ್ಟವಾಗಿರುವುದನ್ನು ಕಾಣುತ್ತವೆ. ಕಾಡುಗೊಲ್ಲರಲ್ಲಿ ಇನ್ನೊಂದು ರೀತಿಯ ವಿಶಿಷ್ಠ ಮದುವೆಯೆಂದರೆ ಅವರ ಉಪಯೋಗಿಸುವ ಆಯುಧಗಳಿಗೆ ಮದುವೆ ಮಾಡುವ ಸಂಪ್ರದಾಯವನ್ನು ನೋಡಬಹುದಾಗಿದೆ. ಇದನ್ನು ನೋಡಿದರೆ ಇದು ಬುಡಕಟ್ಟು ಜನಾಂಗದವರ ರೀತಿಯ ಮದುವೆ ಎನಿಸುತ್ತದೆ.

ಇವರ ಮದುವೆಗಳಲ್ಲಿ ಇನ್ನೊಂದು ವಿಶೇಷವೆಂದರೆ ಬ್ರಾಹ್ಮಣರ ಪುರೋಹಿತರನ್ನ ಕರೆಸದಿರುವುದು. ಕಾಡುಗೊಲ್ಲರ ಪೂಜಾರಿಗಳೇ ಆಗಬೇಕು ಇದನ್ನ ನೋಡಿದರೆ ಇವರಲ್ಲಿ ಸುಧಾರಣೆಯ ಮನೋಭಾವನೆ ಇರುವುದನ್ನು, ಹಾಗೆಯೇ ಯಾವ ಜನರನ್ನು ತಮ್ಮ ಹಟ್ಟಿಯೊಳಗಡೆ ಸೇರಿಸದಿದ್ದುದ್ದೆ ಇದಕ್ಕೆ ಕಾರಣವಿರಬಹುದು.

ಜನರಲ್ಲು ಸಹ ಕಟ್ಟುನಿಟ್ಟಿನ ಸಂಪ್ರದಾಯವನ್ನು ಕಾಣಬಹುದು. ಹೆಣ್ಣಿಗೆ ಹೆರಿಗೆನೋವು ಪ್ರಾರಂಭವಾದ ತಕ್ಷಣ ಅವಳನ್ನ ಹಟ್ಟಿಯಿಂದ ಹೊರಗೆ ದೂರದಲ್ಲಿ ಮೊದಲೆ ಸಿದ್ದ ಮಾಡಿದ ಗುಡಿಸಲುಗಳಲ್ಲಿ ಅವಳನ್ನು ಇರಿಸುತ್ತಾರೆ. ಊರಿನಲ್ಲಿ ಹೆರಿಗೆಯಾದರೆ ಊರಿಗೆಲ್ಲಾ ಸೂತಕ ಎಂದು ಹಾಗೆಯೇ ಅವರ ನೆರಳು ಗಂಡಸರ ಮೇಲೆ ಬೀಳಬಾರದೆಂದು ಅವರದು ಊರಿಂದ ಹೊರಗೆ

ಹೆರಿಗೆಯಾಗಬೇಕು. ಎಂಬ ನಿಯಮ ಮತ್ತು ಅವಳ ಅಡಿಗೆಯನ್ನು ಅವಳೆ ಮಾಡಿಕೊಂಡು ಊಟ ಮಾಡಬೇಕಾಗುತ್ತದೆ. ಗಾಳಿ, ಮಳೆ, ಚಳಿಯಾದರೂ ಮಗು, ಬಾಣಂತಿ ಊರಿನಿಂದ ಹೊರಗೆ ಇರಬೇಕು ಎಂಬ ನಿಯಮ. ಇದು ಮಾರಮುತ್ತಣ್ಣನಿಂದ ಅವನ ಹೆಂಡತಿ ಸಾತಮ್ಮನಿಗೆ ಈ ಸಂಪ್ರದಾಯ ಇವರಲ್ಲಿ ಬಂದಿತು ಎನ್ನುತ್ತಾರೆ.

ಹೆಣ್ಣು ಮಕ್ಕಳು ಮೈನೆರೆದ ಸಂದರ್ಭದಲ್ಲಿಯು ಸಹ ಇವರು ಹಟ್ಟಿಯಿಂದ ಹದಿನಾರು ದಿನಗಳ ಕಾಲ ಹೊರಗಿರಿಸುತ್ತಾರೆ. ಈ ಎರಡು ಸಂದರ್ಭದಲ್ಲಿ ಕಾಡುಗೊಲ್ಲರು ನಡೆದುಕೊಳ್ಳುವ ರೀತಿ ವಿಶಿಷ್ಟವಾದುದು. ಇನ್ನ್ಯಾವುದೇ ಜನಾಂಗದಲ್ಲಿ ಕಾಣಬರದ ರೀತಿಯ ಸಂಪ್ರದಾಯವನ್ನು ನಾವು ನೋಡಬಹುದಾಗಿದೆ.

ಸಾವು ಸಂಭವಿಸಿದಾಗ ಇವರು ಶವದ ಮೇಲೆ ಹಾಕುವುದಕ್ಕೆ ವಿಧುವೆಯ ಕೈಯಿಂದ ಅಗಸರ ಮನೆಯ ಮಡಕೆಯಿಂದ ಅನ್ನ ಮಾಡಿಸುವುದು ಒಂದು ವಿಶೇಷವಾಗಿದೆ.

ಹಾಗೆಯೇ ಪೂಜಾರಿಯ ನೇಮಕದಲ್ಲಿಯು ಒಂದು ವಿಶೇಷತೆಯನ್ನು ಕಾಣುತ್ತೇವೆ. ಇವರಲ್ಲಿ ಪೂಜಾರಿ ಪಟ್ಟವನ್ನು ಕಟ್ಟಲು ಒಂದು ಸಂಪ್ರದಾಯವನ್ನು ಅನುಸರಿಸುತ್ತಾರೆ. ಪೂಜಾರಿ ತೀರಿ ಹೋದರೆ ಅಥವಾ ವಯಸ್ಸಾಗಿದ್ದರೆ ಅವನ ಹಿರಿಯ ಮಗನಿಗೆ ಮದುವೆಯಾಗದಿದ್ದರೆ ಅವನನ್ನು ನೇಮಿಸುತ್ತಾರೆ. ಮದುವೆಯಾಗಿದ್ದರೆ ಮದುವೆಯಾಗದ ಅವನ ತಮ್ಮಂದಿರನ್ನ, ಅವರ್‍ಯಾರು ಇಲ್ಲದಿದ್ದರೆ ಅವರ ಸಂಬಂಧಿಕರಲ್ಲಿ ಒಬ್ಬರನ್ನು ಹಿರಿಯ ಪೂಜಾರಿ ಹೂಮಾಲೆ ಹಾಕುವುದರ ಮೂಲಕ ನೇಮಿಸುತ್ತಾನೆ. ನೇಮಕವಾದ ಮೇಲೆ ಅವನು ಮದುವೆಯಾಗಬಹುದು. ಇದು ಇವರ ಸಮಾಜದಲ್ಲಿ ಕಂಡು ಬರುವ ನಿಯಮ ಈ ರೀತಿಯ ಪೂಜಾರಿಯ ನೇಮಕ ತೀರವಿರಳ.

ಇನ್ನು ಕುಟುಂಬದಲ್ಲಿ ಅವಿಭಕ್ತ ಕುಟುಂಬವನ್ನು ಕಾಡುಗೊಲ್ಲರಲ್ಲಿ ಹೆಚ್ಚಾಗಿ ಕಾಣುತ್ತೇವೆ. ಮನೆಗೆ ಹಿರಿಯ ಮಗನೆ ಮನೆಯ ಜವಬ್ದಾರಿಯನ್ನು ಹೊರುವವನಾಗಿರುತ್ತಾನೆ. ಅವನೆ ಎಲ್ಲಾ ತೀರ್ಮಾನವನ್ನು ಕೈಗೊಳ್ಳವಂತವನು. ನಾವು ಜುಂಜಪ್ಪನ ಕಾವ್ಯದಲ್ಲಿ ಹಿರಿಯ ಮಕ್ಕಳಾದವರೆ ತಂದೆ ಇಲ್ಲದೆ ಹೋದಾಗ ಮನೆಯ ಜವಬ್ದಾರಿಯನ್ನು ಹೊತ್ತು ಕೊಂಡಿರುವುದನ್ನು ನೋಡಬಹುದಾಗಿದೆ. ಜುಂಜಪ್ಪ, ತಮ್ಮಂದಿರು, ತಂಗಿಯನ್ನು ಚಿಕ್ಕವಯಸ್ಸಾದರೂ ಅವನೆ ನೋಡಿಕೊಂಡಿದ್ದು, ಹಾಗೆಯೇ ಕಂಬೇರುಗೊಲ್ಲರು ಒಟ್ಟಿಗೆ ಜುಂಜಪ್ಪನಿಗೆ ಕಷ್ಟವನ್ನು ಕೊಟ್ಟಿದ್ದು, ಚಿಕ್ಕಾಲಪ್ಪ, ದೊಡ್ಡಾಲಪ್ಪ ಅಣ್ಣ ಮದುವೆಯಾಗುವ ತನಕ ನಾವು

ಮದುವೆಯಾಗುವುದಿಲ್ಲವೆಂದುದ್ದು ಎಲ್ಲವನ್ನು ನೋಡಿದರೆ ಹಿರಿಯರಿಗೆ ಇವರು ಹೆಚ್ಚಿನ ಗೌರವವನ್ನು ಕೊಡುತ್ತಿದ್ದರು. ಸೋದರ ಮಾವನಿಗೆ ಹೆಣ್ಣನ್ನು ಕೊಡುವ ಸಂಪ್ರದಾಯವು ಸಹ ಇತ್ತು, ಮಾರಕ್ಕ ನನ್ನು ಕಂಬೇರುಗೊಲ್ಲರ ನಾಗನಿಗೆ ಕೊಟ್ಟಿದ್ದು ನೋಡಿದರೆ ಈ ರೀತಿಯ ಮದುವೆಗಳು ಇವರಲ್ಲಿ ಪ್ರಚಲಿತವಾಗಿದ್ದವು ಎನಿಸುತ್ತದೆ.

ಕಾಡುಗೊಲ್ಲರಲ್ಲಿ ವಿಶಿಷ್ಟವಾದ ಯಾವ ಹಬ್ಬವು ಕಾಣವುದಿಲ್ಲ. ಆದರೆ ದೇವರ ಜಾತ್ರೆಗಳನ್ನು ಆಚರಿಸುತ್ತಾರೆ. ಜುಂಜಪ್ಪ ಎತ್ತಪ್ಪ, ಚಿತ್ರದೇವರ, ಕಾಟುಮದೇವರ, ಪಾತೇದೇವರು, ಕೇತೇದೇವರ ಜಾತ್ರೆ, ಮತ್ತು ಭೂತಪ್ಪ ಮತ್ತು ಮಾರಮ್ಮನ ಜಾತ್ರೆಗಳನ್ನು ನಡೆಸುತ್ತಾರೆ.

ಇವುಗಳಲ್ಲಿ ಒಂದು ವಿಶೇಷವಾದ ಜಾತ್ರೆ ಎಂದರೆ ಕಾಟುಮದೇವರ ಜಾತ್ರೆ, ಈ ಜಾತ್ರೆಗೆ ಒಂದು ಮತ್ತು ಎರಡನೇ ದಿನ ಬರುವವರು ಒಂದು ಗಾಡಿ ಜಾಲಿಮುಳ್ಳನ್ನು ತಂದು ದೇವಸ್ಥಾನದ ಬೇಲಿಗೆ ಹಾಕುವ ರೂಢಿ ಇದೆ. ಜಾತ್ರೆಗೆ ಬಂದವರು ಮುಳ್ಳನ್ನು ತಂದುಹಾಕುರವುದು ಈ ಜಾತ್ರೆ ವಿಶೇಷವಾಗಿದೆ. ಶ್ರೀಲಕ್ಷ್ಮಿ ಮಕ್ಕಳು, ಹಸುವಿನ ಕರುವಿನ ಮಕ್ಕಳನ್ನು ಕರೆದುಕೊಂಡು ಬಂದು ಸಿತ್ರು ದೇವರು ಕಾಟಮದೇವರು ಬಂಗಾರದ ಗೊಡಗಿಗೆ ಸುತ್ತ ಮುಳ್ಳನ್ನು ಹಾಕಿದ್ದೆ ಇರಬೇಕು. ಎನಿಸುತ್ತದೆ. ಅಥವಾ ದೇವರ ಗುಡಿಯ ಸುತ್ತ ಬೇಲಿ ಹಾಕಲು ಮುಳ್ಳು ತಂದಿದ್ದು ಸಾಕಾಗದೆ ಹೋದಾಗ ಎಲ್ಲರೂ ತಂದು ಹಾಕಲಿ ಎಂದು ನೇಮಿಸಿದ್ದು ಮುಂದುವರಿದುಕೊಂಡು ಈ ರೀತಿಯಾಗಿರಬೇಕು.

ಪಾತೇದೇವರ ಜಾತ್ರೆ ಕಾಡುಗೊಲ್ಲರಲ್ಲಿ ಪ್ರತಿವರ್ಷ ನಡೆಯದೆ, ಹರಕೆ ಮಾಡಿಕೊಂಡವರು ಮಾತ್ರ ಈ ಜಾತ್ರೆಯನ್ನು ನಡೆಸುತ್ತಾರೆ. ಬೇರೆ ಜನಾಂಗದಲ್ಲಿ ಹರಕೆ ಮಾಡಿ ಪೂಜೆ ಮಾಡಿಸಿಸುವುದನ್ನು ನೋಡಿದ್ದೇವೆ. ಆದರೆ ಜಾತ್ರೆ ಮಾಡಿಸುತ್ತೇನೆ ಎಂದು ಹರಕೆ ಮಾಡಿಕೊಳ್ಳುವುದಿಲ್ಲ ಕಾಡುಗೊಲ್ಲರಲ್ಲಿ ಮಾತ್ರ ಇದನ್ನು ನೋಡುತ್ತೇವೆ.

ಬಲಿ ಕೊಡುವುದು ಇವರು ಎಲ್ಲರಂತೆ ಆಚರಿಸುತ್ತಾರೆ. ಇವರಲ್ಲಿ ಹಿಂದೆ ಬುಡಕಟ್ಟು ಜನಾಂಗಗಳ ರೀತಿಯಲ್ಲಿ ನರಬಲಿಯು ಪ್ರಚಲಿತವಾಗಿತಂತೆ. ದೇವರುಗಳಿಗೆ ಎಡೆಯನ್ನು ಇಡುವ ಪದ್ಧತಿಯು ಇದ್ದು ಕೆಲವಾರು ದೇವರಿಗೆ ಮಾಂಸಾಹಾರವನ್ನು, ಕೆಲವಾರು ದೇವರಿಗೆ ಸಸ್ಯಹಾರದ ಎಡೆಗಳನ್ನು ಇಡುತ್ತಾರೆ. ಜುಂಜಪ್ಪನು ಸಹ ದೇವತೆಗಳನ್ನೆಲ್ಲಾ ತನ್ನ ಕಡೆಗೆ ಒಲಿಸಿಕೊಳ್ಳಲು ದೇವಗನ್ನಿಕೆಯರಿಂದ 'ಭಟ್ಟಾಮೃತದ' ಅಡಿಗೆಯನ್ನು ಮಾಡಿಸಿ ಎಲ್ಲರಿಗೂ ಊಟಕ್ಕೆ ಹಾಕಿರುವುದರಿಂದಲೋನೊ ಇವರಲ್ಲಿ ಈ ಎಡೆ ಇಡುವ ಪದ್ಧತಿ ರೂಢಿಗೆ ಬಂದಿರಬೇಕು.

ಹರಕೆ ಕಟ್ಟಿ ಕೊಳ್ಳವುದು ಸಹ ಇತರರಲ್ಲಿ ಇರುವಂತೆ ಇದೆ. ಜುಂಜಪ್ಪನ ಕಾವ್ಯದಲ್ಲಿಯು ಹರಕೆಯ ಪ್ರಸ್ತಾವಿದೆ. ಕಂಬೇರುಗೊಲ್ಲರು ತಾಳೆದುರ್ಗಿಗೆ ಹರಕೆ ಕಟ್ಟಿಕೊಂಡಿರುವುದನ್ನು ಕಾಣಬಹುದು. ಹಾಗೆಯೇ ಹಾವು, ಚೇಳು, ವಂಡರಗಪ್ಪೆಯ ಒಡೆಯ ಜುಂಜಪ್ಪ ಎಂದು ಕೊಂಡು ಇವುಗಳು ಕಡಿದವರು ಹರಕೆ ಮಾಡಿಕೊಳ್ಳುವುದು ಹೆಚ್ಚು ಪ್ರಚಲಿತದಲ್ಲಿದೆ. ಕಾಡುಗೊಲ್ಲರಲ್ಲಿ ಹಾವಿನ ಹುತ್ತ, ದನದ ಕೊಟ್ಟಿಗೆ, ದೇವರ ಗುಬ್ಬಗಳು ಪವಿತ್ರವಾದ ಸ್ಥಳಗಳು, ಹಾವಿನ ಹುತ್ತದಲ್ಲಿ ಕಾಡುಗೊಲ್ಲರ ಅಧಿದೇವತೆ ಜುಂಜಪ್ಪನಿರುತ್ತಾನೆ, ಎಂಬುದು ಅವರ ನಂಬಿಕೆ. ಅದಕ್ಕೆ ಅವರು ಭಯ ಭಕ್ತಿಯಿಂದ ಮದುವೆ ಶಾಸ್ತ್ರದಲ್ಲಿಯು ಹುತ್ತವನ್ನು ಪೂಜಿಸುತ್ತಾರೆ. ಹಾಗೆಯೇ ದನದ ಕೊಟ್ಟಿಗೆಯಲ್ಲಿ ಶ್ರೀಕೃಷ್ಣನಿರುತ್ತಾನೆಂದು ಅದನ್ನು ಪೂಜಿಸುತ್ತಾರೆ. ಇತರ ಪೂಜೆಗಳನ್ನು ಎಲ್ಲಾ ಜನಾಂಗದವರ ರೀತಿಯಲ್ಲಿ ಮಾಡುತ್ತಿರುವುದನ್ನು ನೋಡಬಹುದು.

ಪ್ರಕೃತಿಯಲ್ಲಿರುವ ವಿವಿಧ ಶಕ್ತಿಗಳನ್ನು ವಶಪಡಿಸಿಕೊಳ್ಳುವುದಕ್ಕೆ ಮಾನವ ಅನುಸರಿಸುವ ವಿಧಾನಗಳಲ್ಲಿ ಮಾಟವು ಒಂದು. ಕಾಡುಗೊಲ್ಲರು ಮಾಟಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಟ್ಟಿಲ್ಲ. ಇವರು ಸ್ವತಹ ಮಾಟವನ್ನು ಮಾಡುವುದಿಲ್ಲ. ಆದರೆ ತಮಗೆ ಒಳ್ಳೆಯದಾಗಲಿ ಎಂದೋ ಬೇರೆಯವರಿಗೆ ಕೆಟ್ಟದಾಗಲಿ ಎಂದೊ, ಬೇರೆ ಜನಾಂಗದವರ ಕೈಯಲ್ಲಿ ಮಾಟಮಾಡಿಸುತ್ತಾರೆ. ಜುಂಜಪ್ಪನ ಕಾವ್ಯದಲ್ಲಿಯು ಈ ಮಾಟದ ಪ್ರಸಂಗ ಬಂದಿದೆ. ಜುಂಜಪ್ಪನ ದನಗಳು ಹೆಚ್ಚಾದಾಗ ಕಂಬೇರುಗೊಲ್ಲರು ಇವನ ದನಗಳು ನಾಶವಾಗಲಿ ಎಂದು ಮಾದಿಗರ ಪುಟ್ಟಣ್ಣನ ಕೈಯಲ್ಲಿ ಮಾಟಮಾಡಿವುವ ಸನ್ನಿವೇಶ ಹಾಗೆಯೇ ಬಡಮ್ಮೆಲನಿಗೆ ಮಾಡಿಸಿದ ಮಾಟವನ್ನು ಕಾಣಬಹುದಾಗಿದೆ.

ಇತರ ಜನರಲ್ಲಿರುವಂತೆ ಇವರಲ್ಲಿಯು ಕೆಟ್ಟಕಣ್ಣಿನ ನಂಬಿಕೆ ಇದೆ. ಇದಕ್ಕೆ ಇವರು ಸಹ ಇದರರಂತೆ ಪರಿಹಾರದ ಮಾರ್ಗಗಳನ್ನು ಹುಡುಕಿಕೊಂಡಿದ್ದಾರೆ. ಕಾರಲಂಜು ಮಾಡಿ ಹಾಕುವುದು. ಮಂಗಾರೆಕಳ್ಳು, ಮೂರು ಕಣ್ಣಿನ ಚಿಪ್ಪುತಂದು ಮಗುವಿಗೆ ನಿವಾಳಿಸುವುದು. ಮತ್ತು ಮೂರು ಕಪ್ಪೆ, ಮೂರು ಮೀನುಗಳನ್ನು ತೆಗೆದುಕೊಂಡು ಇದರ ಜೊತೆಗೆ ಅಕ್ಕಿ, ಕಡ್ಡಿ, ಉಪ್ಪು, ಮೆಣಸಿನಕಾಯಿ, ಇದ್ದಿಲ್ಲನ್ನು ಹಾಕಿ ಸೂರಿನ ನೀರು ಬೀಳು ಜಾಗದಲ್ಲಿ ನಿವಾಳಿಸಿ ಗುಂಡಿ ತೋಡಿ ಹಾಕಿ ಮುಚ್ಚುವುದು ಹೀಗೆ ಎಲ್ಲರ ರೀತಿಯಲ್ಲಿ ಕಟ್ಟ ಕಣ್ಣನ್ನು ನಿವಾಳಿಸುತ್ತಾರೆ.

ಕಾಡುಗೊಲ್ಲರಲ್ಲಿ ಕಣಿಯನ್ನು ಕೇಳುವ ಸಂಪ್ರದಾಯ ರೂಢಿಯಲ್ಲಿತ್ತು. ಈಗಲು ಗೌರಸಂದ್ರದ ಮಾರಕ್ಕನ ಜಾತ್ರೆಯಲ್ಲಿ ಕಣಿ ಹೇಳುವ ಕೊರವಂಜಿಯವರು ಒಂದು ಕಡೆ

ಸೇರುತ್ತಾರೆ. ಕಾಡುಗೊಲ್ಲರು ಅವರುಗಳ ಹತ್ತಿರ ಕಣಿಯನ್ನು ಕೇಳುತ್ತಾರೆ. ಕೊರವಂಜಿಯರಿಂದ ಪ್ರಭಾವಿರಾದ ಕೆಲವಾರು ಗೊಲ್ಲತಿಯರು ಕಣಿ ಹೇಳುವ ಪರಿಪಾಠವನ್ನು ಬೆಳೆಸಿಕೊಂಡಿದ್ದಾರೆ. ಇದಕ್ಕೆ ಸಾಕ್ಷಿಯಾಗಿ ಜುಂಜಪ್ಪನ ಕಾವ್ಯದಲ್ಲಿ ಗೌರಸಂದ್ರದಮಾದಕ್ಕ ಕೊರವಂಜಿಯ ಕೆಲಸ ಮಾಡುತ್ತಾಳೆ. ಸಿನ್ನಮ್ಮ ಮಕ್ಕಳಿಲ್ಲದೆ. ಕೊರಗುತ್ತಾ ಕಾಡಿನಲ್ಲಿ. ಹೋಗುವಾಗ ಕೊರವಂಜೆಯ ವೇಷದಲ್ಲಿ ಬಂದ ಮಾರಕ್ಕ ಅವಳಿಗೆ ಕಣಿಯನ್ನು ಹೇಳುತ್ತಾಳೆ ಜುಂಜಪ್ಪ ಕಷ್ಟ ಕಾಲದಲ್ಲಿ ಇದ್ದಾಗ ನೆನೆದ ತಕ್ಷಣ ಬರುವುದು ಅವನಿಗೆ ಮಾರ್ಗದರ್ಶನ ನೀಡುವುದನ್ನು ಕಾಣುತ್ತೇವೆ.

ಭವಿಷ್ಯ ಹೇಳುವುದು ಸಹ ಇವರಲ್ಲಿ ಪ್ರಚಲಿತವಾಗಿದೆ. ಎನಿಸುತ್ತದೆ. ಜುಂಜಪ್ಪನ ಕಾವ್ಯದಲ್ಲಿ ಜುಂಜಪ್ಪ ಬೇರೊಬ್ಬ ವ್ಯಕ್ತಿಯ ಮನಸ್ಸಿನಲ್ಲಿದ್ದ ಆಲೋಚನೆಗಳನ್ನು ತಿಳಿಯುವ ಬಹುದೂರದಲ್ಲಿ ನಡೆದ ಘಟನೆಯನ್ನು ಕಾಣುವ, ಭವಿಷ್ಯವನ್ನು ತಿಳಿಯುವ ಶಕ್ತಿಯನ್ನು ಹೊಂದಿದ್ದನೆಂಬುವುದನ್ನು ತಿಳಿಯುತ್ತದೆ.

ಕಾಡುಗೊಲ್ಲರು ತಮ್ಮ ಸಾಮಾಜಿಕ ನೆಲೆಗಟ್ಟಿನಿಂದ ಇತರ ಜನರಿಗಿಂತ ಬೇರೆಯಾಗಿರುವುದನ್ನು ಕಾಣಬಹುದು.

**ಸಾಂಸ್ಕೃತಿಕ ನೆಲೆ : –**

ಕಾಡುಗೊಲ್ಲರ ಸಾಂಸ್ಕೃತಿಕ ನೆಲೆಯನ್ನು ನೋಡಿದಾಗ ವೇಷ ಭೂಷಣಗಳು ತುಂಬಾ ಸರಳವಾಗಿವೆ. ಮುದುಕರು ಒಂದು ಲಂಗೋಟಿಯನ್ನು ಕಟ್ಟಿಕೊಂಡು ಒಂದು ಕಂಬಳಿಯನ್ನು ಹೊದ್ದುಕೊಂಡಿರುತ್ತಾರೆ. ಇವರು ಕಾಲಿಗೆ ಚಪ್ಪಲಿಗೆಯನ್ನು ಹಾಕಿರುತ್ತಾರೆ. ಕೆಲವರು ಲಂಗೋಟಿಯ ಮೆಲೆ ಉದ್ದವಾದ ಅಂಗಿಯನ್ನು ತೊಟ್ಟುಕೊಂಡಿರುತ್ತಾರೆ. ಪಾದದ ವರೆಗೆ ಕಚ್ಚೆಪಂಚೆ ಹಾಕಿಕೊಂಡಿರುವವರು ಕಡಿಮೆ. ಹೆಚ್ಚಾಗಿ ಮಂಡಿಯವರೆಗೆ ಕಚ್ಚೆಯನ್ನು ಹಾಕಿಕೊಂಡಿರುವವರು ಹೆಚ್ಚು ಇವರು ಮಂಡಿಯವರೆಗೆ ಪಂಚೆ ಹಾಕುವುದರ ಉದ್ದೇಶ ದನ ಕುರಿಗಳನ್ನು ಮೇಯಿಸುವುದಕ್ಕೆ ಪ್ರದೇಶದಿಂದ ಪ್ರದೇಶ ಹೊಡಾಡುವುದಕ್ಕೆ ಕಷ್ಟ ವಾಗುತ್ತಿದೆ. ಎಂದಿರಬೇಕು. ಇವರು ತಲೆಗೆ ಕೆಂಪು ಪೇಟವನ್ನು ಸುತ್ತಿಕೊಂಡಿರುತ್ತಾರೆ. ಹಾಗೆಯೇ ಇವರ ಜೀವನದಲ್ಲಿ ಕರಿಯ ಕಂಬಳಿ ಬಹುಮುಖ್ಯಪಾತ್ರವನ್ನು ವಹಿಸುತ್ತದೆ. ಕಾಡುಗೊಲ್ಲರಿಗೆ ಬಹಳ ಪ್ರಿಯವಾದುದು. ಇದು ಚಳಿಗಾಲದಲ್ಲಿ ಹೊದ್ದುಕೊಳ್ಳುವುದಕ್ಕೆ, ಮಳೆ ಬಂದಾಗ ಅದರಿಂದ ರಕ್ಷಣೆಯನ್ನು ಪಡೆಯುವುದಕ್ಕೆಜ, ಮಲಗುವುದಕ್ಕೆ ಹಾಸಿಕೊಳ್ಳುವುದಕ್ಕೆ, ಕುಳಿತುಕೊಳ್ಳುವಾಗ ಹಾಸಿ

ಕುಳಿತುಕೊಳ್ಳುವುದಕ್ಕೆ ಹೀಗೆ ಕರಿಯ ಕಂಬಳಿ ಕಾಡುಗೊಲ್ಲರಿಗೆ ಬಹಳ ಪ್ರಯೋಜನ ಕಾರಿಯಾಗಿದೆ.

ಕಾಡುಗೊಲ್ಲರಲ್ಲಿ ವೀಳೆಯದೆಲೆ ಹಾಕುವುದು ಸರ್ವೆ ಸಾಮಾನ್ಯವಾಗಿದೆ. ಇವರು ಕಾಡಿನಲ್ಲಿ ದನ ಕುರಿಗಳನ್ನು ಮೇಯಿಸುವ ಸಂದರ್ಭದಲ್ಲಿ ಬೇಜಾರುಇಗೆ ಮತ್ತು ನೀರಿದಾಹದಿಂದ ತಪ್ಪಿಸಿಕೊಳ್ಳಲು ಎಲೆ ಅಡಿಕೆ ಹಾಕಿಕೊಳ್ಳುತ್ತಿದ್ದರಂತೆ. ಇದಕ್ಕೆ ಬೇಕಾದ ಸಲಕರಣೆಗಳನ್ನು ತಮ್ಮ ಜೊತೆಯಲ್ಲಿಯೆ. ಹೊಟೆಚೀಲ ಎಂಬುವುದರಲ್ಲಿ ಇಟ್ಟುಕೊಳ್ಳುತ್ತಿದ್ದರು. ಕಂಚಿದಟ್ಟಿಯನ್ನು ಸೊಂಟಕ್ಕೆ ಸುತ್ತಿವುದು. ಏಳುಮೊಳದ ಪಾಗನ್ನು ತಲೆಗೆ ಸತ್ತಿಕೊಳ್ಳುವುದು ಇವರಲ್ಲಿ ದೊಡ್ಡಸ್ತಿಕೆಯ ಸಂಕೇತ. ಕಾಡುಗೊಲ್ಲರು ತಲೆಗೆ ಎಣ್ಣೆಯನ್ನು ಹಚ್ಚುವವರು ಕಡಿಮೆ. ಇದಕ್ಕೆ ಬದಲಾಗಿ ತುಪ್ಪವನ್ನು ಹೆಚ್ಚುತ್ತಾರೆ.

ಹೆಂಗಸರ ಉಡುಗೆಗಳು ಸರಳವಾಗಿರುವುದನ್ನು ನೋಡಬಹುದು. ಕಾಡು ಗೊಲ್ಲರಲ್ಲಿ ಸಂಪ್ರದಾಯಸ್ಥ ಹೆಂಗಸರು ರವಿಕೆಯನ್ನು ತೊಡುವುದಿಲ್ಲ. ಕೆಂಪು ಅಂಚಿನ ಬಳಿಯ ಸೀರೆಯನ್ನು ಉಡುತ್ತಾರೆ. ಮದುವೆಗೆ ಮೊದಲೆ ಬೆಳ್ಳಿಯ ಕಡಗವನ್ನು ಹಾಕಿಕೊಂಡಿರುತ್ತಾರೆ. ಮದುವೆಯಾದ ಮೇಲೆ ಎಡಗೈಗೆಗೊಲ್ಲಕಡಗವನ್ನು ತೊಡುತ್ತಾರೆ. ತಲೆಗೊದಲನ್ನು ಹೆಣೆದುಕೊಳ್ಳುವುದಿಲ್ಲ ಇತ್ತಿಚೆಗೆ ಆಧುನಿಕತೆಯ ಪ್ರಭಾವದಿಂದ ಹೆಣೆದುಕೊಳ್ಳುವುದು ರೂಢಿಗೆ ಬಂದಿದೆ. ಸಂಪ್ರದಾಯಸ್ಥ ಇಟ್ಟುಕೊಳ್ಳುತ್ತಾರೆ. ಕೆಲವು  ಕಡೆ ಹಣೆಗೆ ವಿಭೂತಿಯನ್ನು ಹಚ್ಚಿಕೊಳ್ಳುತ್ತಾರೆ. ಇವರು ಹೆಚ್ಚಿಗೆ ಆಭರಣವಗಳನ್ನು ತೊಡುವುದಿಲ್ಲ. ಹಾವಿನಾಕಾರದ ತೋಳಬಂದಿ ಹೆಂಗಸರು  ತೊಡುವ ಆಭರಣ ಹೆಂಗಸರು ಬಳೆಯನ್ನು ತೊಡುತ್ತಾರೆ. ಗಂಡ ಸತ್ತಾಗ ಇವರು ಬಳೆಯನ್ನು ಹೊಡೆಯುವುದಿಲ್ಲ ಕುಂಕುಮವನ್ನು ಅಳಿಸುವುದಿಲ್ಲ ಇದಕ್ಕೆ ಕಾರಣ ಶ್ರೀಕೃಷ್ಣಗೆ ನೆಮ್ಮೆಲ್ಲರ ಪತಿ ಎಂಬ ಕಲ್ಪನೆಯಿಂದ ಇವರಲ್ಲಿ ವಿಧವೆಯರೆ ಇಲ್ಲದ ಜನಾಂಗ ಇದು. ಇತ್ತೀಚೆಗೆ ಹೆಂಗಸರು ಕೆಂಪು ಅಂಚಿನ ಬಿಳಿಯ ಸೀರೆಯನ್ನು ಉಡುವವರು ಕಡಿಮೆಯಾಗಿ, ಬಣ್ಣ ಬಣ್ಣದ ಸೀರೆ ಉಡುವವರು ಹೆಚ್ಚಾಗಿದ್ದಾರೆ.

ಇವರು ಮದುವೆಯಲ್ಲಿಯು ಹೆಚ್ಚಿನ ಶೃಂಗಾರವನ್ನು ಮಾಡುವುದಿಲ್ಲ ಮದುವೆಯ ಗಂಡಿಗೆ ಮುಂಗೈ ಬದ್ದು, ತೋಳಿಗೆ ಬಟ್ಟನ ಸಲಿಗೆ, ಕಿವಿಯ ಮೈಲ್ಭಾಗಕ್ಕೆ ಮಾರಾಠಮುರು, ಕಿವಿಗೆ ಹತ್ತಕಡಕು ತೆಲೆ, ಏಳು ಮೊಳದ ಪಾಗು, ಹೆಗಳಿ ಮೇಲೆ ಕರಿಯ ಕಂಬಳಿ, ಸೊಂಟಕ್ಕೆ ಕಂಚಿನ ದಟ್ಟಿ, ಕಾಲಿಗೆ ಚಪ್ಪಲಿ ಮತ್ತು ಮೇಣಗಪ್ಪದ ಎಲೆ ಅಡಿಕೆ ಚೀಲ ಕೊಡುತ್ತಾರೆ.

ಹಾಗೆಯೇ ಹೆಣ್ಣಿಗೆ ಕಾಲಂದುಗೆ, ಪಿಲ್ಲ, ತೋಳುಬಂದಿ ಗೆಜ್ಜೆ ಪಟ್ಟಿ, ಸುತ್ತು ಮಿಂಚು, ಬೇಸರಿ ತಮ್ಮ ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿ ಹಾಕಿರುತ್ತಾರೆ.

ಕಾಡುಗೊಲ್ಲರು ದೇವಸ್ಥಾನಗಳನ್ನು ಒಂದು ವಿಶಿಷ್ಟ ರೀತಿಯಲ್ಲಿ ಕಟ್ಟುತ್ತಾರೆ. ಹಟ್ಟಿಗಳ ಮಧ್ಯೆ ದೇವಸ್ಥಾನ ಇರುತ್ತದೆ. ಈ ದೇವಸ್ಥಾನವನ್ನು ಬಿದಿರಿನಿಂದ ಮಾಡಿ, ಅದಕ್ಕೆ ಹಂಚಿಹುಲ್ಲು ಅಥವಾ ಬಾದೆಹುಲ್ಲನ್ನು ಹೊದಿಸಿರುತ್ತಾರೆ. ದೇವಸ್ಥಾನ ಗೋಳಾಕಾರವಾಗಿದ್ದು, ಬಾಗಿಲು ಚಿಕ್ಕದಾಗಿದ್ದು ಪೂರ್ವಾಭಿಮುಖವಾಗಿರುತ್ತದೆ. ದೇವಸ್ಥಾನವು ಚಿಕ್ಕದಾಗಿದ್ದು ಒಳಗಡೆ ಪೂಜಾರಿ ಮಾತ್ರ ನಿಂತುಕೊಂಡು ಪೂಜೆ ಮಾಡುವಷ್ಟು ಜಾಗ ಮಾತ್ರವಿರುತ್ತದೆ. ಒಂದೊಂದು ಕಡೆ ಇಬ್ಬರು ಕುಳಿತುಕೊಳ್ಳುವಷ್ಟು ಜಾಗವಿರುತ್ತದೆ. ದೇವಸ್ಥಾನದ ಬಾಗಿಲು ನಾಲ್ಕು ಅಡಿಗಳಿಗಿಂತ ಎಂತ್ತವಾಗಿರುವುದಿಲ್ಲ. ಒಳಗೆ ಜನ ಬಗ್ಗಿಕೊಂಡು ಹೋಗಬೇಕು. ದೇವಸ್ಥಾನವನ್ನು 'ಗುಬ್ಬ' ಎಂದು ಕರೆಯುತ್ತಾರೆ. ಈ ಗುಬ್ಬವನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವರ್ಗಾಹಿಸಬಹುದು. ವರ್ಗಾಹಿಸುವುದಕ್ಕೆ ಉದಾಹರಣೆ ಎಂದರೆ ಬ್ರಿಟಿಷರು ಬಂದ ಮೇಲೆಗೊಲ್ಲರ ಹಟ್ಟಿಗಳಿಗೆ ಹರಿಜನರನ್ನು ನುಗ್ಗಿಸುವ ಪ್ರಯತ್ನ ಮಾಡಿದಾಗ ಗುಬ್ಬವನ್ನು ಕಾಡಿಗೆ ತೆಗೆದುಕೊಂಡು ಅವಿತಿಟ್ಟು ಅವರು ಊರಿಂದ ಹೊರಗೆ ಹೋದ ಮೇಲೆ ಶುದ್ಧಿ ಮಾಡಿ ತೆಗೆದುಕೊಂಡು ಬಂದರು. ಈಚೇಗೆ ನಾಗರೀಕತೆಯ ಪ್ರಭಾವದಿಂದ ಗುಬ್ಬಗಳನ್ನು ಕಟ್ಟುವುದಕ್ಕಿಂತ ಹೆಚ್ಚಾಗಿ ಹಂಚಿನ ಮನೆಗಳನ್ನು ಕಟ್ಟಿ ಅದರೊಳಗೆ ದೇವರನ್ನು ಕೂರಿಸುತ್ತಾರೆ. ಇತ್ತೀಚೆಗೆ ತಾರಸಿಯನ್ನು ಹಾಕಿ ಕಟ್ಟಿರುವುದನ್ನು ಕಾಣುತ್ತವೆ. ಹಾಗೆಯೇ ದೇವಸ್ಥಾನದ ಸುತ್ತ ಕಳ್ಳೀ ಬೇಲಿಯನ್ನು ಎಲ್ಲಾ ಕಡೆಯಲ್ಲಿಯು ಹಾಕಿರುತ್ತಾರೆ. ಈಚೇಗೆ ಬೇಲಿಗೆ ಬದಲಾಗಿ ದೊಡ್ಡ ದೊಡ್ಡ ಹಾಸುಕಲ್ಲನ್ನು ಒತ್ತಾಗಿ ನಿಲ್ಲಿಸಿ ಕಾಂಪೌಂಡನ್ನು ಮಾಡಿದ್ದಾರೆ. ಕಾಡುಗೊಲ್ಲರ ದೇವಸ್ಥಾನದ ಬಾಗಿಲಿಗೆ ಹಿತ್ತಾಳೆಯ ತಗಡನಬ್ಬು ಹೊದಿಸಿರುತ್ತಾರೆ. ಈ ತಗಡಿನ ಮೇಲೆ ಜುಂಜಪ್ಪನ ಕಾವ್ಯದ ಬಡಮ್ಮೆಲಾ ಮತ್ತು ಚಿಕ್ಕರಂಭೆ ಹಸುವಿನ ಕರುವಿನ ಚಿತ್ರವನ್ನು ಬಿಡಿಸಿರಯುತ್ತಾರೆ. ಇವೆರಡು ಕಾಡುಗೊಲ್ಲರಿಗೆ ಪವಿತ್ರವಾದ ಚಿಹ್ನೆಗಳು

ಜುಂಜಪ್ಪನ ಕಾವ್ಯವನ್ನು ಹಾಡುವಾಗ ಬಳಸುವ ಗಣೆ ಇವರ ಸಂಗೀತ ವಾದ್ಯ. ಇದನ್ನು ಪಿಳ್ಳಂಗೋವಿ ಎಂದು ಕರೆಯುತ್ತಾರೆ. ಇದು ನಾಲ್ಕು ಅಡಿಉದ್ದದ ಬಿದಿರಿನ 'ಗಳು' ಇದರ ಉಪಯೋಗ ಬಹಳ. ಊರಿನಡೆಯಲು ಊರುಗೋಲು, ನುಡಿಸಲು ಗಣೆ, ದನಕುರಿ ಹೊಡೆಯಲು ಕೋಲು ಹಾಗೂ ಬೀಸುವ ದೊಣ್ಣೆಯಾಗಿ ಬುತ್ತಿಗೂಡೆ ಕಟ್ಟಿ ಹೆಗಲಿ ಮೇಲೆ ಇರಿಸಿ ಹೊರಲು ಸಾಧನವಾಗಿ ಬಳಸುತ್ತಾರೆ. ಕಾಡುಗೊಲ್ಲರು.

ಕಾಡುಗೊಲ್ಲರು ತಮ್ಮ ವಿಶಿಷ್ಟವಾದ ಸಂಸ್ಕೃತಿಯಿಂದ ಇತರ ಜನಾಂಗದವರಿಗಿಂತ ಭಿನ್ನರಾಗಿದ್ದಾರೆ. ಇವರ ಉಡುಗೆ ತೊಡುಗೆ ರೀತಿ ನೀತಿ ಬೇರೆಯಾಗಿದೆ.

**ಸಾಹಿತಿಕ ನೆಲೆ :**

ಕಾಡುಗೊಲ್ಲರ ಸಂಸ್ಕೃತಿಯನ್ನು ತೋರಿಸುವುದು ಕಾಡುಗೊಲ್ಲರ ಸಾಹಿತ್ಯ. ಇವರಲ್ಲಿ ಸಂಮೃದ್ಧವಾಗಿ ಸಾಹಿತ್ಯ ಸಿಗುತ್ತದೆ. ಧಾರ್ಮಿಕ ಸಾಹಿತ್ಯ ಪುರಾಣಗಳ ರೂಪದಲ್ಲಿ ಲಭ್ಯವಾಗುತ್ತದೆ. ಕಾಡುಗೊಲ್ಲರ ಜುಂಜಪ್ಪ, ಎತ್ತಪ್ಪ, ಚಿತ್ರದೇವರು ಕಾಟಮದೇವರು ಇನ್ನು ಮುಂತಾದ ದೇವತೆಗಳ ಬಗ್ಗೆ ಹೆಚ್ಚಿನ ಸಾಹಿತ್ಯ ಲಭ್ಯವಾಗಿದೆ. ಇವುಗಳಲ್ಲಿ ಚಲುವರಾಜುವವರ ಜುಂಜಪ್ಪನ ಕಾವ್ಯ ದೀರ್ಘವಾದುದು ಮತ್ತು ವೈಭವಯುತವಾದುದು. ಹೀಗೆಯೇ ತೀನಂ ಶಂಕರ ನಾರಾಯಣರ ಜುಂಜಪ್ಪನ ಪುರಾಣ ಬಹಳ ಮುಖ್ಯವಾದವು. ಜುಂಜಪ್ಪನ ಕಾವ್ಯದಲ್ಲಿ ಮೂರು ತಲೆಮಾರುಗಳ ವಿಷಯ ಬಂದಿರುವುದರಿಂದ ಇದೊಂದು ದೊಡ್ಡ ಕಾವ್ಯ ಏಳುನೂರ ಐವತ್ತು ಪುಟಕ್ಕು ಮಿಗಿಲಾದ ಸಾಹಿತ್ಯ ದೊರೆತಿರುವುದನ್ನು ನೋಡಬಹುದು. ಇದು ಕಾಡುಗೊಲ್ಲರು ಎಲ್ಲಾ ವಿಚಾರಗಳನ್ನು ತಿಳಿಸಿ ಅವರ ಬಗ್ಗೆ ತಿಳಿದುಕೊಳ್ಳಲು ಸಹಾಯಕವಾಗಿದೆ. ಈ ಸಾಹಿತ್ಯದಿಂದ ಕಾಡುಗೊಲ್ಲರ ನಂಬಿಕೆ ಸಂಪ್ರದಾಯಗಳು, ಆಚಾರ–ವಿಚಾರ, ನಿಯಮ ಎಲ್ಲವನ್ನು ನೋಡಬಹುದು. ಇನ್ನಿತರ ಮೌಖಿಕ ಸಾಹಿತ್ಯದ ಓದಿನಿಂದ ಇವರ ಸಾಹಿತ್ಯವನ್ನು ಮೂಲ ಸಂಸ್ಕೃತಿಯನ್ನು ತಿಳಿದುಕೊಳ್ಳಬಹುದು.

ಕಾಡುಗೊಲ್ಲರಲ್ಲಿ ಐತಿಹ್ಯಗಳು ಸಹ ಸಿಗುತ್ತವೆ. ಇವರಲ್ಲಿ ಕೆಲವು ಐತಿಹ್ಯ ಮತ್ತು ಪುರಾಣಕ್ಕೆ ವ್ಯತ್ಯಾಸವನ್ನು ಗುರುತಿಸುವುದಕ್ಕೆ ಕಷ್ಟವಾಗುತ್ತದೆ. ಯಾವುದು ಐತಿಹ್ಯವೆಂದು ಕೊಳ್ಳುತ್ತೆವೆಯೋ ಅದರಲ್ಲಿ ಕಾಡುಗೊಲ್ಲರ ಪುರಾಣದ ಅಂಶಗಳು ಸೇರಿಕೊಂಡಿವೆ.

ಕಾಡುಗೊಲ್ಲರಲ್ಲಿ ಕಥೆಗಳು ಸಿಗುತ್ತವೆ. ಗಂಟೆಗಟ್ಟಲೆ ಕುಳಿತುಕೊಂಡು ಕೇಳಬಹುದಾದ ಕಥೆಗಳು ಇವೆ. ಇವುಗಳಲ್ಲಿ ಸಂಕೀರ್ಣ, ಜನಪದ ಕತೆಗಳಂತೆ ಸರಳವಾದ ಕತೆಗಳು ಇವೆ. ಕಿನ್ನರ ಕತೆಗಳು, ಹಾಸ್ಯ ಕತೆಗಳು ಪ್ರಾಣಿಕತೆಗಳು ಇವೆ. ಸಾವಿರಾರು ಪುಟಗಳಷ್ಟು ದೀರ್ಘವಾದ ಕತೆಗಳು ಇವರಲ್ಲಿ ದೊರೆಯುತ್ತವೆ. ಒಂದೊಂದು ಹಟ್ಟಿಗಳಲ್ಲಿ ಒಬ್ಬನಾದರೂ ಕತೆಗಾರ, ಕತೆಗಾರ್ತಿ ಸಿಗುತ್ತಾರೆ, ದಡ್ಡತನ, ಬುದ್ಧಿವಂತಿಕೆ, ಮೋಸ ಇವುಗಳ ಬಗ್ಗೆಯೇ ತುಂಬಾ ಕತೆಗಳು ಸಿಗುತ್ತವೆ.

ಮದುವೆಯಲ್ಲಿಯ ಸಂದರ್ಭದಲ್ಲಿಯು ಶೋಭಾನೆ ಪದಗಳನ್ನು ಹಾಡುತ್ತಾರೆ. ಇವರು ಇತರ ಜನಾಂಗಗಳಂತೆ ಎಲ್ಲಾ ಸಂದರ್ಭದಲ್ಲಿಯೂ ಪದಗಳು ಹಾಡುತ್ತಾರೆ. ಹೆಣ್ಣು ಮಕ್ಕಳು ಮೈನೆರೆದಾಗಲೂ ಈ ಸಂಪ್ರದಾಯವಿದೆ. ಕತೆಗಳನ್ನು ಹೇಳುವುದಕ್ಕೆ ಅವಳ ಜೊತೆಯಲ್ಲಿ ಒಬ್ಬಳು ಎಚ್ಚರವಾಗಿರುವುದಕ್ಕೆ ಬಿಟ್ಟಿರುತ್ತಾರೆ. ಹಾಗೆಯೇ ಅವಳಿಗೆ ಶಾಸ್ತ್ರ ಮಾಡುವ ಸಂದರ್ಭದಲ್ಲಿಯೂ ಪದಗಳನ್ನು ಹಾಡುತ್ತಾರೆ.

ದೇವರ ಜಾತ್ರೆಗಳಲ್ಲಿಯೂ ಕಾಡುಗೊಲ್ಲರ ಹೆಂಗಸರು ಹಾಡುಗಳನ್ನು ಹಾಡುತ್ತಾರೆ. ದೇವರ ಪುರಾಣಗಳಿಗೆ ಸಂಬಂಧಿಸಿದ ಹಾಡನ್ನು ಗಂಡಸರು ಹಾಡುವ ರೀತಿಯೇ ಬೇರೆ, ಹೆಂಗಸರು ಹಾಡುವ ರೀತಿಯೇ ಬೇರೆ. ಗಂಡಸರ ಹಾಡುಗಳಲ್ಲಿ ವೀರರಸ ಪ್ರಧಾನವಾಗಿರುತ್ತದೆ. ಹೆಂಗಸರ ಹಾಡಿನಲ್ಲಿ ಕರುಣರಸ ಪ್ರಧಾನವಾಗಿ ಇರುತ್ತದೆ. ಜುಂಜಪ್ಪನ ಕಾವ್ಯದ ಜುಂಜಪ್ಪ ಹುಟ್ಟಿದ್ದು, ಕಂಬೇರು ಗೊಲ್ಲರು ಜುಂಜಪ್ಪನನ್ನು ಮದ್ದು ಇಕ್ಕಿಕೊಂದಿದ್ದನ್ನು ಹೆಂಗಸರು ಹಾಡುತ್ತಾರೆ. ಗಂಡಸರು ಜುಂಜಪ್ಪನ ಸಾಹಸಗಳನ್ನು ಹಾಡುತ್ತಾರೆ. ಕೇತೇದೇವರು, ಪಾತೇ ದೇವರು, ಎತ್ತಯ್ಯ ಇವರಿಗೆ ಸಂಬಂಧಿಸಿದ ಹಾಡುಗಳನ್ನು ಗಂಡಸರು ಒಂದು ರೀತಿ ಹಾಡಿದರೆ, ಹೆಂಗಸರು ಇನ್ನೊಂದು ರೀತಿಯಲ್ಲಿ ಹಾಡುತ್ತಾರೆ. ಹೆಣ್ಣು ದೇವತೆಗಳ ಹಾಡುಗಳನ್ನು ಹೆಂಗಸರು ಮಾತ್ರ ಹಾಡುತ್ತಾರೆ. ಎಲ್ಲಾ ದೇವರುಗಳ ಸಮಗ್ರ ಸಾಹಿತ್ಯವು ತಿಳಿಯುವುದು ಮಾತ್ರ ಗಂಡಸರ ಹಾಡುಗಳಿಂದ.

ಕಾಡುಗೊಲ್ಲರಲ್ಲಿ ಕೆಲವು ಗಾದೆ ಮತ್ತು ಒಗಟುಗಳನ್ನು ನೋಡಬಹುದು. ಇವುಗಳ ಸಂಖ್ಯೆ ಬಹಳ ಕಡಿಮೆ. ಇವರು ಸಹ ಎಲ್ಲರ ರೀತಿಯಲ್ಲಿ ಮಾತುಗಳ ಮಧ್ಯೆ ಗಾದೆಗಳನ್ನು ಬಳಸುವುದನ್ನು ಕಾಣಬಹುದು.

"ಹಾಲಿನ ಹಂಗಿದ್ದರೂ ಹಾರುವನನ್ನು ನಂಬಬಾರದು"

"ಕುರಿಕೊಟ್ಟೊರಿಗೆ ಮರಿಕೊಡು"

"ಮುಂಡೆ ಮಕ್ಕಳೂ ಒಂದೆ, ಮೂಗುದಾರ ಇಲ್ಲದ ಎತ್ತು ಒಂದೇ"

ಹಾರುವನನ್ನು ನಂಬಬಾರದು ಎಂಬುದು ಸಿತ್ತೂರುಲಿಂಗ, ಕಾಟುಮದೇವರಿಗೆ ಬ್ರಾಹ್ಮಣ ಮೋಸ ಮಾಡಿದ ರೀತಿಯಿಂದ ಬಂದಿರಬಹುದೆನಿಸುತ್ತದೆ. ಅದಕ್ಕೆ ಅವರ ಮದುವೆಗಳಲ್ಲಿ ಬ್ರಾಹ್ಮಣ ಪುರೋಹಿತರನ್ನು ಕರೆಯುವುದಿಲ್ಲ. ಜುಂಜಪ್ಪನ ತಂಗಿ ಮಾರಕ್ಕನನ್ನು ಸಿನ್ನಮ್ಮ ತಮ್ಮ ನಾಗಣ್ಣನಿಗೆ ಕೊಟ್ಟಂತಹ ಸಂದರ್ಭದಲ್ಲಿ ಹೇಳಿದ ಗಾದೆ ಇದಿರಬಹುದು. ಹಾಗೇ ಜುಂಜಪ್ಪ

ಯಾರಿಗೂ ಎದರದೆ ಹೋದ ಸಂದರ್ಭದಲ್ಲಿ ಕಂಬೇರುಗೊಲ್ಲರು ಹೇಳಿದ ಮಾತುಗಳು ಇವು ಈ ಜನಾಂಗದಂತೆ ಮುಂದುವರಿದುಕೊಂಡು ಬಂದಿರಬಹುದು. ಒಗಟುಗಳು ಸಹ ಇವರಲ್ಲಿ ಕಂಡು ಬರುತ್ತವೆ.

"ಬಿಸಿಲಿಗೆ ಗಂಡ

ಮಳೆಗೆ ಮಿಂಡ

ಗಾಳಿಗೆ ಮಂದಾದ್ರಿ ಮೂರ್ತಿ

ಧೂಳಿಗೆ ಪಾಷಂಡ ಮೂರ್ತಿ (ಕಂಬಳಿ)"

ತಮ್ಮ ಜೀವನದಲ್ಲಿ ಬಹು ಮುಖ್ಯ ಪಾತ್ರವಹಿಸುವ ಕಂಬಳಿಯನ್ನು ತಮ್ಮ ಒಗಟಿನಲ್ಲಿ ಕಟ್ಟಿಕೊಂಡಿದ್ದಾರೆ.

ಬಿಡುವಿನ ವೇಳೆಯಲ್ಲಿ ರಾತ್ರಿಯ ವೇಳೆ ಇವರು ಮನರಂಜನೆಗಾಗಿ ಕೋಲಾಟವನ್ನು ಹಾಡುತ್ತಾರೆ. ಇವರಲ್ಲಿ ಕೋಲಾಟದ ಪದಗಳು ಹೇರಳವಾಗಿ ಇವೆಯಂತೆ. ತೀನಂ ಶಂಕರನಾರಾಣರು ಹೇಳಿರುವಂತೆ ಒಂದೊಂದು ಹಟ್ಟಿಯು ಸಾಹಿತ್ಯದ ದೃಷ್ಠಿಯಿಂದ ಕಣಜವಾಗಿವೆ ಎಂಬ ಮಾತು ಸತ್ಯ, ಶಿಷ್ಟ ಸಾಹಿತ್ಯದ ಪ್ರಭಾವವಿಲ್ಲದೆ ಮೂಲ ಜನಪದ ದಾಟಿಯನ್ನು ಉಳಿಸಿ, ಬೆಳಸಿಕೊಂಡು ಬಂದಿರುವ ಕಾಡುಗೊಲ್ಲರ ಸಾಹಿತ್ಯ ಅತ್ಯುತ್ತಮವಾಗಿದೆ.

**ಭಾಷಿಕ ನೆಲೆ :**

ಕಾಡುಗೊಲ್ಲರ ಭಾಷೆ ಸರಳವಾದ ಭಾಷೆ, ಅವರ ಕಾವ್ಯವನ್ನು ಓದಿದಾಗ ನಮ್ಮೊಳಗಿನ ಒಂದು ಕಾವ್ಯವನ್ನು ಓದಿದ ಅನುಭವವನ್ನು ತಂದುಕೊಡುತ್ತದೆ. ಕಠಿಣ ಪದಗಳನ್ನು ಉಪಯೋಗಿಸಿ ಹೇಳಬೇಕಾದಂತಹ ಪದಗಳನ್ನು ಸರಳ ಪದಗಳನ್ನು ಉಪಯೋಗಿಸಿ ಹೇಳುವುದನ್ನು ಕಾಣಬಹುದಾಗಿದೆ. ಪುರಾಣದ ವಿಷಯಗಳನ್ನು ತುಂಬಾ ಸರಳವಾಗಿ ಹೇಳಿರುವುದನ್ನು ಕಾಣಬಹುದು.

ಎಲ್ಲಾ ಜನಾಂಗದವರಂತೆ ಇತ್ತೀಚಿಗೆ ಕಾಡುಗೊಲ್ಲರ ಮೇಲೆಯು ಸಹ ಇಂಗ್ಲೀಷಿನ ಪ್ರಭಾವವಾಗಿರುವುದನ್ನು ಕಾಣಬಹುದು. ಅವರ ಜುಂಜಪ್ಪನ ಕಾವ್ಯದಲ್ಲಿ ಅವರ ಪ್ರಭಾವವಿರುವುದನ್ನು ಕಾಣಬಹುದು. ಇಲ್ಲಿ ಬಳಸಿರುವ 'ರೆಡಿ', ಕಾಂಪೌಂಡು, ಕಸ್ಟಡಿ, ಟೈಮ್,

ಕರ್ಚಿಪ್ಪು, ಸೂಟ್, ಟಾಮ್ ಟಾಮ್ ಹೀಗೆ ಇಂಗ್ಲೀಷ್ ಪ್ರಭಾವ ಕಾಡುಗೊಲ್ಲರ ಭಾಷೆಯ ಮೇಲೆ ಉಂಟಾಗಿರುವುದನ್ನು ಹಲ್ಲ, ಮಿಸ್ಮಿಲ್ಲ ಉರ್ದು ಭಾಷೆಯ ಪ್ರಭಾವವು ಇದೆ.

ಕೆಲವು ಕಡೆಗಳಲ್ಲಿ ಕಾಡುಗೊಲ್ಲರು ತೆಲಗು ಭಾಷೆಯನ್ನು ಮಾತನಾಡುತ್ತಾರೆ. ಆದರೆ ಕನ್ನಡವನ್ನೆ ಹೆಚ್ಚು ಮಾತನಾಡುವುದು.

ಜುಂಜಪ್ಪನ ಕಾವ್ಯದಲ್ಲಿಗಳಿಗಾಗೋ ಅನ್ನು ಪದವನ್ನು ಕೊನೆಯಲ್ಲಿ ಒಳಸಿರುವುದನ್ನು ನೋಡಿದರೆ ಇದು ಒಳ್ಳೆಯಗಳಿಗೆ ಎಂಬುವುದಕ್ಕೆ ಬಳಸಿರುವ ಪದ ಎನಿಸುತ್ತದೆ.

ಈ ಕಾವ್ಯದಲ್ಲಿ ಆದಿಪ್ರಾಸ, ಅಂತ್ಯ ಪ್ರಾಸಗಳಲ್ಲಿ ಅವರು ಹೇಗೆ ಕತೆಯನ್ನು ನಿರೂಪಿಸಿಬೇಕೂ ಹಾಗೇ ಕತೆಯನ್ನು ಮುಂದುವರಿಸಿಕೊಂಡು ಹೋಗಿದ್ದಾರೆ. ಹಾಗೆಯೇ ಇವರು ಬಳಸಿರುವ ಬೈಗುಳ ಮುಂಡೆ, ಧಗಡಿ ಮಕ್ಕಳು, ಹೆಂಣ್ತಿರ ಮಿಂಡ, ಭ್ರಷ್ಟ ಮುಂಡೆ ಇಂತಹ ಬೈಗುಳಗಳನ್ನು ಸಹಜವಾಗಿ ಬಳಸಿದ್ದಾರೆ.

ಕಾವ್ಯದಲ್ಲಿ ಅಲ್ಲಲ್ಲಿ ಜುಂಜಪ್ಪನ ನಾಮಸ್ಮರಣೆಯನ್ನು ಮಾಡುವುದರ ಮೂಲಕ ಜುಂಜಪ್ಪ ತಮಗೆ ಎಷ್ಟು ಮುಖ್ಯವೆಂದು ತೋರಿಸಿಕೊಡುತ್ತಾರೆ.

ಹೀಗೆ ಜುಂಜಪ್ಪನ ಕಾವ್ಯವು ಒಂದು ಜನಾಂಗದ ಸಮೃದ್ಧ ಬದುಕನ್ನು ತಿಳಿಸಿ ಕೊಡುತ್ತದೆ. ಜನಾಂಗದ ಇತಿಹಾಸವನ್ನು ಅವರ ನಡವಳಿಕೆಯನ್ನು ಅವರ ಸಂಪ್ರದಾಯಗಳು ಯಾವ ಸಂಧಿಯಲ್ಲಿ ಹುಟ್ಟುಕೊಂಡವು ಎಂಬುವುದನ್ನು ತಿಳಿಸುತ್ತದೆ.

# ಅಧ್ಯಾಯ – 7

## ಉಪಸಂಹಾರ

ಸಂಜಾತೆ, ಸುಜಾತೆ, ಸುಕೋಮಲೆಯಾದ ಈ ಜನಪದ ಕ್ಷೇತ್ರದ 'ಬುಡಕಟ್ಟು ಮಹಾಕಾವ್ಯ ಮಾಲೆ ಜುಂಜಪ್ಪ' ಒಂದು ಅನರ್ಘ್ಯರತ್ನ, ಒಂದು ಜನಾಂಗದ ಸಂಪೂರ್ಣ ವಿಷಯವನ್ನು ತಿಳಿಸುವಂತಹದ್ದು, ಅವರ ಧಾರ್ಮಿಕ ಕಾವ್ಯಗಳಲಿ ದೇವತೆಗಳಾದ ಜನರು ಅನುಸರಿಸಿದ ಪದ್ಧತಿಗಳೆ ಇವರಲ್ಲಿ ಸಂಪ್ರದಾಯಗಳಾಗಿ ಮುಂದುವರಿದಿವೆ. ಅವರ ಆಕಸ್ಮಿಕಗಳೆ ನೀತಿಯಾಗಿದೆ. ಅವರ ಆಚಾರಗಳೆ ನಿಯಮಗಳಾಗಿವೆ. ಜುಂಜಪ್ಪನ ನಡೆನುಡಿ ಆಚಾರ ವ್ಯವಹಾರಗಳು ಕಾಡುಗೊಲ್ಲರ ಆದರ್ಶಗಳಾಗಿವೆ.

ಜುಂಜಪ್ಪನ ಕಾವ್ಯದಲ್ಲಿ ಜುಂಜಪ್ಪ ಒಬ್ಬ ಸಾಂಸ್ಕೃತಿಕವೀರ, ಶೈವ ಮತ್ತು ವೈಷ್ಣವ ಸಂಪ್ರದಾಯಗಳಿಂದ ಮಿಶ್ರಕಾವ್ಯ ಜುಂಜಪ್ಪ. ವೀರಭದ್ರನ ಅವತಾರ ಇವನು ಶೈವ ಸಂಪ್ರದಾಯದವನು. ಇವರು ವೆಂಕಟರಮಣನನ್ನು ನೆನೆದಿರುವುದನ್ನು ನೋಡಿದರೆ ಶೈವರಾಗಿದ್ದ ಕಾಡುಗೊಲ್ಲರು ವೈಷ್ಣವರ ಕಡೆಗೆ ವಾಲಿರುವುದನ್ನು ಕಾಣಬಹುದು. ವೈಷ್ಣವರು ನಾವು ಹೆಚ್ಚು, ಶೈವರು ನಾವೆಚ್ಚು ಎನ್ನುವ ಕಾಲದಲ್ಲಿ ಸಮನ್ವಯವನ್ನು ಕಂಡುಕೊಂಡಿರುವುದು ಕಾಡುಗೊಲ್ಲರ ಔದರ್ಯವಾಗಿದೆ. ಆದರೆ ಕಾವ್ಯದಲ್ಲಿ ಅವರ ಸೋದರ ಮಾವಂದಿರನ್ನು ಕೊಂದಕತೆ ಕೃಷ್ಣ, ಕಂಸನ ಕಥೆಯನ್ನು ನೆನಪಿಗೆ ತರುತ್ತದೆ. ಕೃಷ್ಣನ ಕತೆ ವೈಷ್ಣವ ಸಂಪ್ರದಾಯದ್ದು.

ಇಲ್ಲಿ ಜುಂಜಪ್ಪನ ತಾಯಿ ಸಿನ್ನಮ್ಮನ ಮಕ್ಕಳನ್ನು ಪಡೆದ ಕತೆ ಮಹಾಭಾರತದ ಕುಂತಿಯನ್ನು ನೆನಪಿಗೆ ತರುತ್ತದೆ. ಅಲ್ಲಿ ಪಾಚಿಡವನ ಹೆಸರನ್ನು ಹೇಳಿದ ಹಾಗೆ, ಇಲ್ಲಿಯೂ ಕೆಂಗರು ಮಲ್ಲನಗೌಡನ ಹೆಸರನ್ನು ಕಾಣಬಹುದು.

ಈ ಕಾವ್ಯದ ಪ್ರಕಾರ ಒಕ್ಕಲಿಗರಿಗೂ ಕಾಡುಗೊಲ್ಲರಿಗೂ ಹತ್ತಿರವಾದ ಸಂಬಂಧವಿದೆ ಎನಿಸುತ್ತದೆ. ಹಾಗೆಯೇ ಬೇಡರ ಪದುಮಣ್ಣನ ಹೊಲದಲ್ಲಿ ಕೆಂಗರು ಮಲ್ಲೇಗೌಡ ಇದ್ದ ಎಂಬುವುದನ್ನು ನೋಡಿದಾಗ ಈ ಮೂರು ವರ್ಗದಲ್ಲಿ ಹತ್ತಿರದ ಸಂಬಂಧವಿತ್ತು ಎನಿಸುತ್ತದೆ. ಮೂಲದಲ್ಲಿ ಈ ಮೂರು ಪಂಗಡವು ಒಂದೇಯಾಗಿದ್ದೊ ಎನಿಸುತ್ತದೆ. ರಾಮಾಯಣದಲ್ಲಿ ಹೆಂಡತಿಯಾದ ಸೀತೆಯನ್ನು ಜನರ ದೃಷ್ಟಿಯಲ್ಲಿ ಕೀಳಾಗಬಾರದು ಎಂದು ಅಗ್ನಿ ಪರೀಕ್ಷೆಗೆ ಒಳಪಡಿಸಿದಂತೆ, ಜುಂಜಪ್ಪ ತಾಯಿಯಾದ ಸಿನ್ನಮ್ಮನನ್ನು ಅನೇಕಾರು. ಪರೀಕ್ಷೆಗೆ ಒಳಪಡಿಸಿದ್ದನ್ನು ಕಾಣಬಹುದು.

ಕಾವ್ಯದಲ್ಲಿ ದೇವರಿಗೂ ಜನರಿಗೂ ಹೆಚ್ಚಿನ ವ್ಯತ್ಯಾಸವೇ ಇಲ್ಲದಿರುವುದನ್ನು ನೋಡಿದರೆ ಅವರು ದೇವತೆಗಳನ್ನು ತಮ್ಮೊಳಗಿನ ಒಬ್ಬರಂತೆ ಪರಿಗಣಿಸುತ್ತಿದ್ದರು ಎನಿಸುತ್ತದೆ. ಹೀಗಿನ ದೇವತೆಗಳು ಜನರ ಮೈಮೇಲೆ ಬಂದು ಹೇಳುತ್ತದೆ, ಎಂಬ ಕುರುಡು ನಂಬಿಕೆಯ ಹಾಗೆ ಅವರಲ್ಲಿ ದೇವತೆಗಳೆ ಅವರುಗಳೊಂದಿಗೆ ಕಷ್ಟಸುಖ ಕೇಳುವ ಮನೆಚು ಯಜಮಾನನ ರೀತಿಯಲ್ಲಿ ಇದ್ದುದ್ದನ್ನು ಕಾಣಬಹುದು.

ಬುಡಕಟ್ಟು ಜನಾಂಗದಲ್ಲಿ ಇಂತಹ ಕಾವ್ಯಗಳನ್ನು ಸಂಗ್ರಹಣೆ ಮಾಡುವುದು ತುಂಬಾ ಕಷ್ಟವಾದ ಕೆಲಸ ಶ್ರಮದಾಯಕವಾದುದು. ಆವರೂ ಚಲುವರಾಜುರವರು ಇಂತಹ ಒಂದು ಕಾವ್ಯವನ್ನು ನಮ್ಮ ಸಾಹಿತ್ಯ ಬಂಡಾರಕ್ಕೆ ತಂದು ಕೊಟ್ಟಿರುವುದು ಶ್ಲಾಘನೀಯ. ಇಡೀ ಒಂದು ಜನಾಂಗದ ಪೂರ್ಣ ವಿಚಾರವನ್ನು ಈ ಒಂದು ಕಾವ್ಯ ತಿಳಿಸಿಕೊಡುತ್ತದೆ. ಕಾಡಿನಲ್ಲಿಯೇ ವಾಸಮಾಡಿ, ಪ್ರಾಣಿಗಳ ಜೊತೆಯಲ್ಲಿನಯೇ ಬದುಕನ್ನು ರೂಪಿಸಿಕೊಂಡವರು ಕಾಡುಗೊಲ್ಲರು. ಅವರಿಗೆ ಅವುಗಳ ಉತ್ಪಾನ್ನವೆ ಇವರ ಬದುಕಿನಲ್ಲಿ ಮುಖ್ಯ ಪಾತ್ರವಹಿಸುತ್ತದೆ. ಹಾಗೆಯೇ ದನ, ಕುರಿಗಳು ಸಹ ಅವರಿಗೆ ಪೂಜ್ಯ ವಸ್ತು, ಪ್ರಾಣಿಗಳು ಸಹ ಇವರ ಜೊತೆ ಮಾತನಾಡಿ ಕಷ್ಟ ಸುಖಗಳನ್ನು ಮನುಷ್ಯರಂತೆ ಹೇಳಿಕೊಳ್ಳುವುದನ್ನು ನೋಡಬಹುದು. ಇವು ಸಹ ಎಷ್ಟೋ ಸಂದರ್ಭದಲ್ಲಿ ಇವರಿಗೆ ಸಹಾಯ ಮಾಡಿರುವುದನ್ನು ಜುಂಜಪ್ಪನ ಕಾವ್ಯದ ಬಡಮೈಲ, ಪಂಚಕಲ್ಯಾಣಿಗಳನ್ನು ನೋಡಬಹುದು.

ಕಾಡುಗೊಲ್ಲರ ಬದುಕಿನ ಚಿತ್ರವನ್ನು ಕೊಡುವಂತಹದ್ದು ಜುಂಜಪ್ಪನ ಕಾವ್ಯ.

****

## -: ಗ್ರಂಥಋಣ :-

**ಆಕರ ಗ್ರಂಥಗಳು :**


1. **ಬುಡುಕಟ್ಟು ಕಾವ್ಯ ಮಹಾ ಮಾಲೆ 'ಜುಂಜಪ್ಪ'**
   – ಚಲುವರಾಜು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.
2. **"ಕಾಡುಗೊಲ್ಲರ ಸಂಪ್ರದಾಯ ಮತ್ತು ನಂಬಿಕೆಗಳು"**
   –ಡಾ॥ ತೀನಂ. ಶಂಕರನಾರಾಯಣ, ಎಂ.ಎ., ಪಿ.ಹೆಚ್‌ಡಿ., ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, 1982.
3. **ಜಾನಪದ ಸಾಹಿತ್ಯ**
   – ಡಾ॥ ಕಾಳೇಗೌಡ ನಾಗವಾರ, ಯುಗಾದಿ ಪ್ರಕಾಶನ, ಬೆಂಗಳೂರು
4. **ಕನ್ನಡ ಜನಪದ ವಿಶ್ವಕೋಶ 1 ಮತ್ತು 2**
   – ಡಾ॥ ಚಂದ್ರಶೇಖರ್ ಕಂಬಾರ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು.
5. **ಮಹಾಕಾವ್ಯ ಒಂದು ಅವಲೋಕನ**
   – ಜಿ.ಎಸ್.ಭಟ್ಟ, ಚೇತನ ಬುಕ್ ಹೌಸ್, ಮೈಸೂರು.
6. **ಜನಪದ ಸಂಭ್ರಮ**
   –ಡಾ॥ ಪಿ.ಕೆ.ರಾಜಶೇಖರ್, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಚಾಮರಾಜಪೇಟೆ, ಬೆಂಗಳೂರು.
7. **ಗಂಧರ್ವ ಲೋಕದ ಗೆಣೆಕಾರರು**
   –ಜಿ.ವಿ.ಆನಂದಮೂರ್ತಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ.
8. **ಜಾನಪದ ಪರಿಭಾವನ**
   –ಅಂಬಾಳಿಕೆ ಹಿರಿಯಣ್ಣ, ಸಂವಹನ, ಮೈಸೂರು.
9. **ಜನಪದ ಕಾವ್ಯ ಕಥೆಗಳು**
   –ಜಿ.ಶಂ. ಪರಮಶಿವಯ್ಯ, ಸುರುಚಿ ಪ್ರಕಾಶನ, ಮೈಸೂರು.

